ಹುರಿದುಂಬಿಸುವ ಚಂಪು. ರೂ. [illegible]

**ಭರತನ ಬಂಧುಪ್ರೇಮ:**—ಪ್ರಾಚೀನಸಂಪ್ರದಾಯಗಳನ್ನು ಆಧುನಿಕ ದೃಷ್ಟಿಯಿಂದ ಸಕಾರಣವಾಗಿ ವಿವರಿಸುತ್ತ ಬರೆದಿರುವ ಭರತನ ಕಥೆ. ರೂ. ೦-೧೦-೦

**ಗುಣನಿರೂಪಣೆ**— ಇತಿಹಾಸದಿಂದ ಉದಾಹರಿಸಿ ಗುಣಗಳನ್ನೆಲ್ಲ ವೀರ್ಯವತ್ತರವಾಗಿ ಬಣ್ಣಿಸಿರುವದು. ರೂ. ೦-೮-೦

**ವಾಲ್ಮೀಕಿಯ ಜಯ:**– ಜ್ಞಾನಬಲಕ್ಕಿಂತಲೂ ಬಾಹುಬಲಕ್ಕಿಂತಲೂ ಪ್ರೇಮಬಲವೇ ಜಗತ್ತಿನ ಸಮೃದ್ಧಿಗೆ ಕಾರಣವೆಂದು ತೋರಿಸುವ ಬಂಗಾಲೀಕಾದಂಬರಿಯ ಅನುವಾದ. ರೂ. ೦-೮-೦

**ತಾರಾನಾಥತರ್ಕವಾಚಸ್ಪತಿ:**– ಅಪ್ರತಿಮಪಂಡಿತನಾಗಿ ಉದ್ಯೋಗಬಲದಿಂದ ತನ್ನ ಜೀವಿಕೆಯನ್ನು ಉನ್ನತಸ್ಥಿತಿಯಲ್ಲಿಟ್ಟುಕೊಂಡು ಧರ್ಮಾರ್ಥವಾಗಿ ವಿದ್ಯೆಯನ್ನು ಪ್ರಚಾರಮಾಡಿ ಪರೋಪಕಾರದಿಂದ ಸಮಸ್ತರಾಜರನ್ನೂ ಬೆರಗುಮಾಡಿರುವಂಥ ಚರಿತ್ರೆಯ ಮೇಲುಪಜ್ಞೆ. ಆ. ೧೦

ಮಂಚಲದೊರೆ ರಾಮರಾವ್,

ಎಸ್. ಎಸ್. ಎನ್. ಬುಕ್‌ಡಿಪೊ, ಬಸವನಗುಡಿ, ಬೆಂಗಳೂರು ಸಿಟಿ.

ಮತ್ತು ಶಂಕರಪುಸ್ತಕಭಂಡಾರ, ಧಾರವಾಡ.

# ವಾಲ್ಮೀಕಿಯ ಜಯ





ಹೊಸಕೆರೆ ಚಿದಂಬರಯ್ಯ,
ಭಕ್ತಬಂಧು ಕಾರ್ಯಾಲಯ, ಬಸವನಗುಡಿ,
**ಬೆಂಗಳೂರು ಸಿಟಿ.**

ಕ್ರಿ. ೧೯೩೮.
ಜನವರಿ

 ಮೂರನೆ ಮುದ್ರಣ, ೧೦೦೦ ಪ್ರತಿಗಳು 

ಶಾ. ೧೮೫೯.
ಪುಷ್ಯ



ಬಿ. ಬಿ. ಡಿ. ಪವರ್ ಪ್ರೆಸ್, ಬೆಂಗಳೂರು ಸಿಟಿ.

ಬೆಲೆ: ೮ ಆಣೆ

# ಈ ಗ್ರಂಥಕರ್ತರ ಇತರ ಗ್ರಂಥಗಳು

**ಶಾಲೋಪಯೋಗಿ ಪುಸ್ತಕಗಳು.**

ಗಣಿತಾಬ್ಜಭಾಸ್ಕರ, ಚರಿತ್ರಚಿಂತಾಮಣಿ,
ಉಪಾಧ್ಯಾಯರ ಯೋಗ್ಯತೆಗಳು, ಮನಶ್ಶಿಕ್ಷಣ,
ಬೋಧನಕ್ರಮ, ಬೋಧನೆಯ ಸ್ವಭಾವ.

**ಪದ್ಯಕಾವ್ಯಗಳು**

ಅನುಭವಾಮೃತ,-ಸರ್ವಾರ್ಥಸಂದರ್ಶಿನಿ ಎಂಬ ಹೊಸ ಟೀಕಿನೊಡನೆ,
ಪರಮಾತ್ಮಸ್ತುತಿ, ಗುರುಸ್ತುತಿಸುಮಾಂಜಲಿ, ಭಕ್ತಿಗೀತಾವಳಿ,
ಮನಸ್ಸಿಗುಪದೇಶ, ನೀತಿಸಾರ, ಸ್ತ್ರೀಧರ್ಮಸಂಗ್ರಹ,
ಭಕ್ತಿದೀಪಿಕೆ, ಶಂಕರಸ್ತೋತ್ರಮಾಲೆ,
ಮಾರುತಿಯ ಚರಿತ್ರೆ, ಶ್ರೀವಿದ್ಯಾರಣ್ಯಕಾವ್ಯ.

**ನಾಟಕಗಳು**

ಸುಶೀಲಾಪರಿಣಯ, ಕೃಷ್ಣಮಹೀಶ್ವರೀ, ಸುಧರ್ಮಪ್ರಭಾವ,
ಕಲಿಸಂತರಣ, ನವೀನಕಲ್ಪ, ಚೂಡಾಲೆ.

**ಕೀರ್ತನ—ಹರಿಕಥೆ—ಗಳು**

ಗಣಪತಿಸ್ವಯಂವರ, ಅನಸೂಯಾಖ್ಯಾನ, ಧ್ರುವಾಖ್ಯಾನ,
ಉತ್ತರಗೋಗ್ರಹಣ, ಶ್ರೀವಿದ್ಯಾರಣ್ಯಾಖ್ಯಾನ,
ಶ್ರೀಶಂಕರಾಚಾರ್ಯರ ಆಖ್ಯಾನ.

**ಕಾದಂಬರಿಗಳು**

ಕಾಲಾಂತಕ, ಮೈತ್ರೇಯಿ.

**ಇತರ ವಚನಗ್ರಂಥಗಳು**

ತಾರಾನಾಥತರ್ಕವಾಚಸ್ಪತಿ, ಮಾಧವರಾವಸಿಂಧ್ಯ, ವಸ್ತುಪ್ರದರ್ಶನ,
ಶಂಕರಕಥಾಮೃತ, ರಾಜಭಕ್ತಿ, ಆರ್ಯಮತಸಾರ, ಸೂಕ್ತಿಮಾಲೆ,
ಭಗವದ್ಗೀತಾಸಾರವಿಚಾರ, ಗೀತಾರ್ಥವಿವರಣೆ, ಜೀವನ್ಮುಕ್ತಿವಿವೇಕ,
ಈಶಸಾರ, ವೇದಾಂತವಿಚಾರದ ಗುಟ್ಟು, ಬ್ರಹ್ಮಾನಂದರು,
ರಾಮನಾಮದ ಮಹಿಮೆ, ಭರತನ ಬಂಧುಪ್ರೇಮ,
ರಾಸಕ್ರೀಡೆ, ಭರತಖಂಡದ ಜೀವಜ್ಯೋತಿಗಳು,
ಝಾಂಸಿಲಕ್ಷ್ಮೀಬಾಯಿ, ಆತ್ಮಶಕ್ತಿಯ ತೇಜಸ್ಸು,
ಆರ್ಯಧರ್ಮಪ್ರದೀಪ, ಗುಣನಿರೂಪಣೆ,
ನೀತಿಗಳ ನೆಲಗಟ್ಟು—ಮೊದಲಾದವು.

-++++++-

# ಪ್ರಸ್ತಾವನೆ

## (ಮೊದಲನೆ ಮುದ್ರಣ)

ಲೋಕದಲ್ಲಿ ಅಸ್ವಾರ್ಥಪರರೆನಿಸಿಕೊಂಡಿರುವ ಯಾರ ಪ್ರಯತ್ನವನ್ನು ನೋಡಿದರೂ ಅದೆಲ್ಲ ಜನಸಮುದಾಯದಲ್ಲಿ ಸಮಾಧಾನವನ್ನು ನೆಲೆಗೊಳಿಸುವದಕ್ಕಲ್ಲದೆ ಮತ್ತೇತಕ್ಕೂ ಅಲ್ಲ. ಒಬ್ಬರಿಗೊಬ್ಬರಿಗೆ ಯುದ್ಧವಾಗುವದೂ ಒಂದು ಸಮಾಧಾನಕ್ಕಾಗಿಯೆ. ಒಬ್ಬರಿಗೊಬ್ಬರಿಗೆ ವಾಕ್ಕಲಹವಾಗುವದೂ ಒಂದು ಸಮಾಧಾನದ ದೆಸೆಯಿಂದಲೆ. ಪ್ರಪಂಚದ ಆಗುಹೋಗುಗಳೇಸಿದ್ದರೂ ಅವೆಲ್ಲ ಸಮಾಧಾನದಲ್ಲಿಯೆ ಪರ್ಯವಸಾನವಾಗುವವು. ಈ ಸಮಾಧಾನಕ್ಕಾಗಿ ಸೃಷ್ಟಿಕಾಲದಿಂದಲೂ ಹೋರಾಟವು ನಡೆಯುತ್ತಲೇ ಇದೆ. ಒಂದೊಂದು ಕಾಲದಲ್ಲಿ ಸಮಾಧಾನವು ಬರುತ್ತದೆ; ಮತ್ತೆ ಹೋಗುತ್ತದೆ. ಒಂದು ಸಲದ ಸಮಾಧಾನಕ್ಕೆ ಕಾರಣವಾದ ಸಾಧನವೆ ಇನ್ನೊಂದು ಸಲಕ್ಕೆ ಅನುಕೂಲಿಸುವದಿಲ್ಲ. ಹೀಗಾಗಿ ನಿಜವಾದ ಸಾಧನವನ್ನು ಮನಗಾಣದೆ ತೊಳಲುವ ಲೋಕಹಿತೈಷಿಗಳಿಗೆ ಈ ಗ್ರಂಥವು ಚಿಂತಾಮಣಿಯಾಗಿದೆ. ದೇಹಬಲಕ್ಕಿಂತಲೂ ಬುದ್ಧಿಬಲಕ್ಕಿಂತಲೂ ಪ್ರೇಮಬಲವು ಶಾಶ್ವತವಾದ ಸಮಾಧಾನವನ್ನು ತಂದುಕೊಡುವದೆಂಬರ್ಥವನ್ನು ಈ ಕಾದಂಬರಿಯು ಸ್ಪಷ್ಟಗೊಳಿಸುತ್ತದೆ. **ಮಹಾಮಹೋಪಾಧ್ಯಾಯರಾದ ಪಂಡಿತ ಹರಪ್ರಸಾದಶಾಸ್ತ್ರಿ,** ಎಂ.ಎ., ಇವರಿಂದ ಬಂಗಾಲೀ ಭಾಷೆಯಲ್ಲಿ ಬರೆಯಲ್ಪಟ್ಟ ಇದರ ಮೂಲಗ್ರಂಥವನ್ನು ಮ॥ರಾ॥ ವಾಸುದೇವ ಗೋವಿಂದ ಆಪಟೆ, ಬಿ.ಎ., ಇವರಿಂದ ಮಹಾರಾಷ್ಟ್ರಭಾಷೆಗೆ ಭಾಷಾಂತರಮಾಡಿಸಿ ಪ್ರಸಿದ್ಧಪಡಿಸಿದ ಪುಣೆಯ ರಾ॥ ರಾ॥ ಎ. ಸಿ. ಭಟ್ಟ ಮತ್ತು ಕಂಪೆನಿಯವರ ಸಮ್ಮತಿಯನ್ನು ಪಡೆದು ನಾನು ಇದನ್ನು ಬರೆದಿರುವೆನು. ಇದು ಮೂಲಗ್ರಂಥದ ಶಬ್ದಶಃ ಭಾಷಾಂತರವಲ್ಲ; ಒಂದು ಕರ್ಣಾಟಕ ಭಾಷಾನುವಾದ. ಅನೇಕ ವಿದ್ವಜ್ಜನರ ಶ್ಲಾಘನೆಗೆ ಪಾತ್ರವಾಗಿ ಅನೇಕ ಭಾಷೆಗೆ ಪರಿವರ್ತನೆಯಾಗಿ ಪ್ರೇಮಪ್ರಧಾನವಾಗಿರುವ ಈ ಉತ್ತಮ ಕಥೆಯನ್ನು ಕನ್ನಡಿಸಿಕೊಳ್ಳುವದಕ್ಕೆ ಅನುಜ್ಞೆಯನ್ನು ಕೊಟ್ಟ ರಾ॥ ರಾ॥ ಎ. ಸಿ. ಭಟ್ಟ ಮತ್ತು ಕಂಪೆನಿಯವರಿಗೆ ನಾನು ಕೃತಜ್ಞನಾಗಿದ್ದೇನೆ.

ಕ್ರಿ. ೧೯೧೩. **ಗ್ರಂಥಕರ್ತ.**

## (ಎರಡನೆ ಮುದ್ರಣ)

ಇದು ಮೂಲಗ್ರಂಥದ ಭಾಷಾಂತರವಲ್ಲವೆಂದೂ ಅನುವಾದವೆಂದೂ ನಾನು ಮೊದಲೇ ಹೇಳಿದ್ದೇನಷ್ಟೆ. ಇದಕ್ಕೆ ಇಲ್ಲಿ ಸಂಕ್ಷೇಪವಾಗಿ ಸಮಾಧಾನವನ್ನು ಹೇಳಲಿಚ್ಛಿಸುತ್ತೇನೆ. ಒಬ್ಬರ ನಡಿಗೆಯ ಹೆಜ್ಜೆಯಲ್ಲಿಯೇ ಇನ್ನೊಬ್ಬರು ಎಡೆಬಿಡದೆ ತಮ್ಮ ಹೆಜ್ಜೆಯನ್ನು ಇಡುತ್ತ ಹೋದರೆ ಆ ಎರಡನೆಯವರ ನಡಿಗೆಯು ಅವರ ಸ್ವಾಭಾವಿಕವಾದದ್ದಲ್ಲವಾದ್ದರಿಂದ ನೋಡುವವರಿಗೆ ಹೇಗೆ ರುಚಿಸಲಾರದೋ ಹಾಗೆ ಮೂಲಗ್ರಂಥದ ಶಬ್ದವಿನ್ಯಾಸವನ್ನೇ ಹಿಡಿದು ಹೋದ ಭಾಷಾಂತರಕ್ಕೂ ಅದೇ ಗತಿಯಾಗುವದೆಂದು ನನಗೆ ಹೆದರಿಕೆ. ಆದ್ದರಿಂದ ಅನುವಾದವು ಹೆಚ್ಚು ಮನೋರಂಜಕವಾದೀತೆಂದು ನನ್ನ ಆಶೆ. ಅಥವಾ ನಾವು ಭಾಷಾಂತರಿಸತಕ್ಕದ್ದು ಅರ್ಥವನ್ನೇ ಹೊರತು ಭಾಷೆಯನ್ನಲ್ಲವಷ್ಟೆ. ಮೈಸೂರು ದೇಶದಲ್ಲಿ ಮೊದಲನೆ ಸಲ ವಿದ್ಯಾಭ್ಯಾಸದ ಸಂಬಂಧವಾದ ಪ್ರದರ್ಶನವು ನಡೆದಾಗ ಒಂದು ದಿನ ಭಾಷಾಂತರಪದ್ಧತಿಯ ವಿಷಯವಾಗಿ ಶ್ರೀಯುತ ಆರ್. ರಘುನಾಥರಾಯರು ತಮ್ಮ ಭಾಷಣವನ್ನು ಹೇಳಿ ಮುಗಿಸುವಾಗ ಹೇಳಿದ ಒಂದು ಮಾತು ಆಗ ಶ್ರೋತೃವರ್ಗದಲ್ಲೊಬ್ಬನಾಗಿದ್ದ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ರೂಪುಗೊಂಡಿರುವದು. ಅದೇನೆಂದರೆ: — "Translation should not smell the original" ಎಂದರೆ ಭಾಷಾಂತರವು ತಾನು ಬೇರೊಂದರಿಂದ ಬಂದದ್ದೆಂಬ ವಾಸನೆಯನ್ನು ಕೂಡ ತಿಳಿಯಗೊಡಬಾರದೆಂದು ತಾತ್ಪರ್ಯ. ಆದ್ದರಿಂದ ನಾನು ಮೂಲದ ಶಬ್ದದ ಜೋಡಣೆಯ ಕಡೆಗೆ ನೋಡದೆ ನನಗೆ ತಿಳಿದ ಮಟ್ಟಿಗೆ ಅದರ ಅರ್ಥವನ್ನೆಲ್ಲ ಭಟ್ಟಿ ಇಳಿಸಿಕೊಂಡಿದ್ದೇನೆ.

ಈ ಮುದ್ರಣದ ಕಾಲದಲ್ಲಿ ನಾನು ಮೂಲದ ಕಡೆಗೆ ಇನ್ನೊಮ್ಮೆ ಲಕ್ಷ್ಯವನ್ನು ಹಾಕಿ ನನ್ನ ಅನುವಾದವನ್ನು ಅಲ್ಲಲ್ಲಿ ತಿದ್ದಿ ಹೆಚ್ಚು ಸರಿಗೊಳಿಸಿರುವೆನು. ವಾಚಕರು ಈ ಗ್ರಂಥದ ವಾಚನದಿಂದ ಜಗತ್ತಿನ ಶಾಂತಿಗೆ ತಾವೂ ಒಂದು ಉಪಕರಣವಾಗಬೇಕೆಂದಿಚ್ಛಿಸುತ್ತೇನೆ. ಈ ಗ್ರಂಥದ ಸಾರಾಂಶವೆಲ್ಲ ಚಿತ್ರದಿಂದ ಸೂಚಿತವಾಗುವಂತೆ ಮುಖಪತ್ರದ ಮೇಲೆ ಇರುವ ಸುಂದರವಾದ ಚಿತ್ರವನ್ನು ಬರೆದುಕೊಟ್ಟ ನನ್ನ ಮಿತ್ರರಾದ ಮ॥ರಾ॥ **ಕೆ. ಶಂಕರರಾಯ**ರವರಿಗೆ ನಾನು ಕೃತಜ್ಞನಾಗಿದ್ದೇನೆ.

ಶಾ. ೧೮೫೮ ಚೈತ್ರ
ಬೆಂಗಳೂರು } **ಹೊಸಕೆರೆ ಚಿದಂಬರಯ್ಯ**

---

## (ಮೂರನೆ ಮುದ್ರಣ)

ಶಾ. ೧೮೫೯. ಪುಷ್ಯ. ಬೆಂಗಳೂರು ಸಿಟಿ.

# ವಿಷಯಕ್ರಮ

ಉತ್ತಮಪದ್ಧತಿ! ಹೊಸಬಗೆಯ ಗ್ರಂಥ!! ಸಿದ್ಧವಾಗುತ್ತಿದೆ!!!

# ಕೀರ್ತನಕಂಠಾಭರಣ

**ಶ್ರೀರಾಮಜನ್ಮ, ಶ್ರೀರಾಮವಿವಾಹ, ಸುಗ್ರೀವಸಖ್ಯ, ಚಿತ್ರಕೂಟವಾಸ, ಪಾದುಕಾಸ್ಥಾಪನೆ, ಜಟಾಯುಮೋಕ್ಷ, ಸೀತಾಕ್ಷೇಮಲಾಭ, ವಿಭೀಷಣನ ಶರಣಾಗತಿ, ರಾವಣನ ಪರಾಭವ, ಶ್ರೀರಾಮಪಟ್ಟಾಭಿಷೇಕ–**

ಎಂಬ ಹತ್ತು ಭಾಗಗಳಲ್ಲಿ ಅಡಕವಾಗಿರುವ

## ಸಂಪೂರ್ಣ ರಾಮಾಯಣ

---

### ಹೆಚ್ಚುಗಾರಿಕೆ

(೧) ಕೀರ್ತನವನ್ನು ನಿಜವಾದ ಸಾರ್ವಜನಿಕಧಾರ್ಮಿಕಶಿಕ್ಷಣವಾಗಿಯೂ ಕೀರ್ತನಕಾರರನ್ನು ಗೃಹಸ್ಥಶಿಕ್ಷಕಮಂಡಲಿಯಾಗಿಯೂ ಮಾರ್ಪಡಿಸುವಂತೆ ಹೃದಯವಿಕಾಸಕವಾದ ಉತ್ತಮವಾದ ಕೈಪಿಡಿಯಾಗಿರುವದು.

(೨) ಜೈನರು, ವೀರಶೈವರು, ಬ್ರಾಹ್ಮಣರು–ಮೊದಲಾದ ಪಂಥದ ಅನೇಕ ಕವಿಗಳ ಇದುವರೆಗಿನ ಬೇರೆಬೇರೆ ಎಷ್ಟೋ ಗ್ರಂಥಗಳಿಂದ ಒಳ್ಳೇ ಪದಪದ್ಯಗಳನ್ನು ಆರಿಸಿ ಜೋಡಿಸಿರುವದರಮೂಲಕ ವಾಚಕರಿಗೆ ಜೇನುತುಪ್ಪದ ಸವಿಯನ್ನುಂಟುಮಾಡಿ ಗ್ರಂಥವನ್ನು ಕನ್ನಡಿಗರ ಕವಿತಾವೈಭವದ್ದೊಂದು ಪ್ರದರ್ಶನಶಾಲೆಯಾಗಿಯೂ ಕೀರ್ತನಕಾರರನ್ನು ಸಜೀವಚರಭಂಡಾರವಾಗಿಯೂ ಆಗುವಂತೆ ರಚಿಸಿ ಕನ್ನಡನಾಡಿನ ಐಕಮತ್ಯಕ್ಕೆ ದಾರಿಯನ್ನು ಹಾಕಿರುವದು.

(೩) ಅಲ್ಲಲ್ಲಿ ಚಮತ್ಕಾರವಾದ ಮತ್ತು ಅರ್ಥಗಾಂಭೀರ್ಯವುಳ್ಳ ಸಂಸ್ಕೃತ ಶ್ಲೋಕಗಳೂ ಅರ್ಥಸಹಿತವಾಗಿ ಶೋಭಿಸುವದು.

(೪) ಕನ್ನಡದ ಪದಪದ್ಯಗಳಿಗೂ ಕಷ್ಟವಾಗಿ ತೋರಿದ ಕಡೆ ಟೀಕನ್ನು ಕೊಟ್ಟಿರುವದು.

(೫) ಯಾವದೊಂದು ಪಂಥದ ಸಿದ್ಧಾಂತದ ಗೋಜಿಗೂ ಹೋಗದೆ ಆಯಾ ಕೀರ್ತನಕ್ಕೆ ಸಂಬಂಧಪಟ್ಟ ಪ್ರತಿಪಾದನೆಯುಳ್ಳ ಬೇರೆಬೇರೆ ಪೀಠಿಕೆಗಳಿರುವದು.

(೬) ಇದೊಂದನ್ನು ಓದಿದರೆ ಅಥವಾ ಕೇಳಿದರೆ ಕನ್ನಡವಾಙ್ಮಯದ ಬಹುಭಾಗವನ್ನು ಓದಿದಂತೆ ಅಥವಾ ಕೇಳಿದಂತೆ ಆಗುವದು.

ಹೊಸಕೆರೆ ಚಿದಂಬರಯ್ಯ,

**ಭಕ್ತಬಂಧುಕಾರ್ಯಾಲಯ, ಬಸವನಗುಡಿ, ಬೆಂಗಳೂರು ಸಿಟಿ.**

* श्रीः *

॥ नमो महद्भ्यः ॥

# ವಾಲ್ಮೀಕಿಯ ಜಯ

## ಮೊದಲನೆ ಸನ್ನಾಹ

### ಹಿಮಾಲಯ

ಮಳೆಗಾಲವು ಹಿಮ್ಮೆಟ್ಟಿದೆ. ಶರತ್ಕಾಲವು ತಲೆಹಾಕಿದೆ. ಮೇಲೆ ಆಕಾಶವೆಲ್ಲ ಸ್ವಚ್ಛವಾಗಿದೆ. ಎಲ್ಲಿ ನೋಡಿದರೂ ಒಂದು ಮೋಡದ ಕಲೆಯು ಕೂಡ ಇಲ್ಲ. ಎತ್ತ ಕಡೆಗೆ ತಿರುಗಿದರೂ ಗಾಢವಾದ ನೀಲ ವರ್ಣ. ಆ ನೀಲವರ್ಣದ ನಡುವೆ ದೊಡ್ಡದೊಡ್ಡ ನಕ್ಷತ್ರಗಳು ಝಗ ಝಗಿಸುತ್ತ ಎದ್ದು ಕಾಣುತ್ತಿವೆ. ಆ ತಾರಾಗಣವನ್ನು ಇಬ್ಭಾಗ ವಾಗಿ ಮಾಡಿ ಬೆಳ್ಳಗೆ ಆಕಾಶಗಂಗೆಯು ಒಡಮೂಡಿದೆ. ನೆಲದ ಮೇಲೆ ನೋಡಿದರೆ ತೇಮವಿನ್ನೂ ಆರುತ್ತ ಬರುತ್ತಿದೆ. ಮರಗಿಡ ಗಳು ಚಿಗುರೆಲೆಗಳಿಂದ ಸೊಂಪಾಗಿ ಕಂಗೊಳಿಸುತ್ತಿವೆ. ಎಲ್ಲೆಲ್ಲಿಯೂ ಆವರಿಸಿಕೊಂಡಿರುವ ಹಸುರು ಭೂದೇವಿಯ ಯೌವನದ ಆವಿರ್ಭಾವ ಸೂಚಕವಾದ ಹಸುರುಡಿಗೆಯ ನೆನಪುಗೊಡುತ್ತಿದೆ. ಮೇಲೆಲ್ಲ ನೀಲ; ಕೆಳಗೆಲ್ಲ ಹಸುರು. ಹೀಗೆ ಒಂದರ ಮಗ್ಗಲಲ್ಲೊಂದು ಎರಡು ಬಣ್ಣ ಗಳನ್ನು ಚಿತ್ರಿಸಿದಂತಿದೆ.

ಈ ಸಮಯದಲ್ಲಿ ಆ ಪರ್ವತದ ಮನೋಹರತೆಯ ಕಡೆಗೆ ಕಣ್ಣು ಹಾಕಿ ನೋಡಿದರೆ ಒಂದು ಕಡೆ ನೂರಾರು ಗಾವುದದವರೆಗೂ ಸಮ ನೆಲವಿರುವ ಭರತಖಂಡ (ಹಿಂದುಸ್ಥಾನ); ಒಂದು ಕಡೆ ಒಂದರ ಹಿಂದೊಂದು ಮುಗಿಲು ಮುಟ್ಟಿರುವ ಪರ್ವತಗಳ ಸಾಲು. ಅದನ್ನೂ ದಾಟಿ ಮಂಜು ಮುಸುಕಿರುವ ಪ್ರದೇಶವನ್ನು ನಿಟ್ಟಿಸಿದರಂತು

ರಾಜಾಧಿರಾಜರ ಸಂಬಂಧವಾದ ಉತ್ಸವಕಾಲಗಳಲ್ಲಿ ದೊಡ್ಡದೊಡ್ಡ ಪಟ್ಟಣಗಳಲ್ಲಿ ಬೆಳಗುವ ನಾನಾವರ್ಣದ ದೀಪಗಳ ಸಾಲುಗಳಂತೆ ಸ್ವಚ್ಛವಾದ ಬಿಳೀ ಮಂಜುಗಡ್ಡೆಗಳ ಮೇಲೆ ಬಿದ್ದು ಪ್ರತಿಫಲಿಸಿದ ಸೂರ್ಯಕಿರಣಗಳ ಹೊಳಪಿನ ಥಳಥಳ.

ಆಗತಾನೆ ಮಳೆಯ ಕಾಟವು ನಿಂತುಹೋಗಿದೆ. ಬೆಳ್ಳಗಿರುವ ನೊರೆಗಳಿಂದ ಕೂಡಿಕೊಂಡು ತಗ್ಗಿಗೆ ಧುಮ್ಮಿಕ್ಕುತ್ತಿರುವ ತಿಳಿನೀರ ಝರಿಗಳು ಹೊರಹೊಮ್ಮುತ್ತಿವೆ. ಒಂದು ಕಡೆ ಮಂಜಿನ ಪದರಗಳ ಮೇಲೆ ಬಿದ್ದ ಬಿಸಲಿನಿಂದೊಡೆದು ಮೂಡಿದ ಕಾಮನಬಿಲ್ಲು ಬಗೆಬಗೆಯ ಬಣ್ಣಗಳ ಬೆಡಗನ್ನು ಬೀರುತ್ತಿದೆ. ಇನ್ನೊಂದು ಕಡೆ ಏನೇನೂ ಕಾಣದ ಕಗ್ಗತ್ತಲೆಯ ನಡುವೆ ಕಣ್ಣಿಗೆ ಕಾಣಬರದೆ ಹರಿಯುತ್ತಿರುವ ಕಿರುನದಿ. ಅದರ ನೆರೆಯಲ್ಲಿ ದಟ್ಟವಾದ ಮರಗಳ ಸಾಲು ಅಥವಾ ತಣ್ಣಗೆ ಕೊರೆಯುತ್ತಿರುವ ಬಂಡೆಗಳು. ಅಲ್ಲಲ್ಲಿ ಕಣ್ಣಿಟ್ಟು ನೋಡಿದರೆ ತಲೆತಿರುಗುವಂಥ ಎತ್ತರದ ಪ್ರದೇಶಗಳು. ಅದರ ಕೆಳಗೇ ಪಾತಾಲವನ್ನು ಮುಟ್ಟುವ ಕೊರಕಲು. ಆ ಕತ್ತಲೆಯಲ್ಲಿಯೂ ನಿಟ್ಟಿಸಿ ನೋಡಿದರೆ ಕೊರಕಲಿನ ಹತ್ತಿರದಲ್ಲಿರುವ ಬಂಡೆಗಳಿಗೆಲ್ಲ ಬಡಿಬಡಿದು ಅಲೆಗಳಿಂದ ಅಲೆದಾಡುವ ಕಾಲ್ಹೊಳೆಗಳೂ ಒಂದರ ಮೇಲೊಂದು ಅವಾಂತರಪ್ರಲಯಗಳಾದರೂ ಆ ಸಂದರ್ಭಗಳಲ್ಲಿ ಯಮನ ದಾಡೆಯ ಹಿಡಿತಕ್ಕೆ ಸಿಕ್ಕದೆ ಚಿರಜೀವಿತ್ವವನ್ನು ಕಾಪಾಡಿಕೊಂಡು ಬಂದಿರುವ ಕಾಡು ಮರಗಳೂ ಆ ಮರಗಳನ್ನು ಸುತ್ತಿಕೊಂಡು ಅವುಗಳ ಆಶ್ರಯದಿಂದ ಜೀವವನ್ನು ಹಿಡಿದಿರುವ ಬಳ್ಳಿಗಳೂ ಅಲ್ಲಿ ಕಾಣುವವು.

ಹಿಮಾಲಯದ ಈ ಸೌಭಾಗ್ಯವು ಎಂದಿಗೂ ಅಚ್ಚಳಿಯದೆ ಇರುವದು. ಮಂಜಿನಿಂದ ಮುಸುಕಿದ ಕೋಡುಗಲ್ಲುಗಳು, ದಡದಡ ಹರಿಯುವ ಝರಿಗಳು, ನೀಲವರ್ಣದ ಪರಮಾವಧಿಯಾದ ಆಕಾಶ—ಇವೆಲ್ಲ ಎಂದಿಗೂ ಒಂದೇ ಸಮ. ನೋಡಿದರೆ ಹೆದರಿಕೆಯಾಗುವಂತಿದ್ದರೂ ಇನ್ನೂ ನೋಡಬೇಕೆನಿಸುವಂಥ ಸೊಗಸು! ಈ ಕಥೆಯು ನಡೆದ ಶರತ್ಕಾಲದಲ್ಲಿ—ಅದರಲ್ಲಿಯೂ ಅಮಾವಾಸ್ಯೆಯ ರಾತ್ರಿಯಲ್ಲಿ—ಹಿಮಾಲಯದ ಶೋಭೆಯು ಅತಿವಿಲಕ್ಷಣವಾಗಿದೆ!

-+ω++ω+-

# ಋಭುಗಳ ಬರುವಿಕೆ

ಸತ್ತ ಮೇಲೆ ಮನುಷ್ಯನು ಏನಾಗುತ್ತಾನೊ ಯಾರಿಗೆ ಗೊತ್ತು! ಪಾಪಿಜೀವವು ಪಿಶಾಚವಾಗುವದೆಂದು ಕೆಲವರು ಹೇಳುವರು. ಪುಣ್ಯವನ್ನು ಮಾಡಿದವರು ಸ್ವರ್ಗಕ್ಕೆ ಹೋಗುವರೆಂದು ಕೆಲವರು ತಿಳಿಯುವರು. ಇದು ಹೇಗಾದರೂ ಇರಲಿ. ಈ ಲೋಕದಲ್ಲಿ ಸತ್ಕಾರ್ಯವನ್ನು ಮಾಡಿದವರು ಋಭುಗಳಾಗುತ್ತಾರೆ. ಋಭುಗಳ ವಾಸಸ್ಥಾನವು ಆ ಆಕಾಶಗಂಗೆಯಿಂದಾಚೆ ಎಲ್ಲಿಯೋ ಇರಬಹುದೆಂದು ತೋರುತ್ತದೆ.

ಈ ಮಾತಿರಲಿ. ಅಮಾವಾಸ್ಯೆಯ ರಾತ್ರಿಯಲ್ಲಿ ಥಟ್ಟನೆ ಆ ಬಿಳಿಯ ಆಕಾಶಗಂಗೆಯು ಇಭ್ಭಾಗವಾದಂತೆ ಆಗಿ ಆ ರಂಧ್ರಮಾರ್ಗದಿಂದ ಅಸಂಖ್ಯಾಕತೇಜಶ್ಶರೀರಿಗಳು ಹೊರಕ್ಕೆ ಹೊರಟರು. ಅವರ ಶರೀರಗಳ ಕಾಂತಿಯು ಪ್ರಸರಿಸುತ್ತಲೇ ಆ ದಿನ ಅಮಾವಾಸ್ಯೆಯು ಪೂರ್ಣಿಮೆಯಾಗಿ ಪರಿವರ್ತನವಾದಂತೆ ಪರಿಣಮಿಸಿತು. ಮೊದಲು ಉಜ್ವಲವಾಗಿ ಕಾಣಿಸುತ್ತಿದ್ದ ನಕ್ಷತ್ರಗಳು ಈಗ ಕಾಂತಿಗುಂದಿ ಬಿಳಿಯ ಬಟ್ಟೆಯ ಮೇಲಣ ಬಿಳಿಯ ಚುಕ್ಕೆಯಂತೆ ಕಂಡವು. ಆ ತೇಜಶ್ಶರೀರಿಗಳು ಮೇಘಮಂಡಲವನ್ನು ದಾಟುತ್ತ ದಾಟುತ್ತ ಕ್ಷಣಕ್ಷಣಕ್ಕೂ ಭೂಮಂಡಲಕ್ಕೆ ಸಮೀಪಸ್ಥರಾಗುವಂತೆ ತೋರುತ್ತಿದ್ದರು. ಗುಂಪುಕಟ್ಟಿಕೊಂಡು ಹಾರಿಬರುವ ಪಕ್ಷಿಗಳಂತೆ ಅವರು ತಂಡತಂಡವಾಗಿ ಆಕಾಶದಲ್ಲೆಲ್ಲ ತುಂಬಿಕೊಂಡ ನೋಟವನ್ನು ಭೂಲೋಕದ ಜನರೆಲ್ಲರೂ ಬೆರಗಾಗಿ ನೋಡುತ್ತಿದ್ದರು. ಆ ತೇಜಃಪುಂಜವನ್ನು ಕೆಲವರು ಧೂಮಕೇತುವೆಂದು ತಿಳಿದರು; ಕೆಲವರು ಉಲ್ಕಾಪಾತವೆಂದು ಯೋಚಿಸಿದರು; ಕೆಲವರು ಶಿಲಾಪಾತವೆಂದು ಊಹಿಸಿದರು; ಕೆಲವರು ನಕ್ಷತ್ರಪುಂಜಗಳೊಡನೆ ಆಕಾಶವು ಮುರಿದು ಬೀಳುತ್ತಿರುವದೆಂದು ಭ್ರಾಂತಿಗೊಂಡರು. ಕೊನೆಗೆ ಎಲ್ಲವೂ ಭ್ರಾಂತಿಯೇ ಆಗಿತ್ತು. ನಿಜವಾಗಿ ನಡೆದದ್ದೇನೆಂದರೆ—ಋಭುಗಳು ತಮ್ಮ ಇಹಲೋಕದ ಜನ್ಮಭೂಮಿಯನ್ನು ನೋಡಿಕೊಂಡು ಹೋಗುವದಕ್ಕಾಗಿ ಹಿಮಾಲಯದ ಶಿಖರಗಳ ಮೇಲಕ್ಕೆ ಬಂದು ನಿಂತರು.

ಆಕಾಶದಿಂದ ಹೊರಹೊಮ್ಮಿದ ಆ ಋಭುಗಳು ಹಿಮಾಲಯದ ಮೇಲಕ್ಕೆ ಬಂದರಷ್ಟೆ. ಭೂಮಿಯ ಹತ್ತಿರಕ್ಕೆ ಬಂದ ಹಾಗೆಲ್ಲ ಅವರ ಆನಂದವು ಹೆಚ್ಚುತ್ತ ಬಂತು. ಯಾವ ಶಿಖರದ ಮೇಲೆ ನೋಡಿದರೂ ಅವರೆ. ಯಾವ ಬಂಡೆಯ ಮೇಲೆ ನೋಡಿದರೂ ಅವರೆ. ಯಾವ ಕೋಡುಗಲ್ಲಿನ ಮೇಲೆ ನೋಡಿದರೂ ಅವರೆ. ಹೀಗೆ ಹರಡಿಕೊಂಡ ಋಭುಗಳು ಆಗ ತಮ್ಮ ಆನಂದಭರದಲ್ಲಿ ದೈವಿಕವೈಖರಿಯಿಂದ ಗಾನ ಮಾಡುವದಕ್ಕೆ ಮೊದಲುಮಾಡಿದರು. ಮನುಷ್ಯಮಾತ್ರದವರು ಅದರ ಅಭಿಪ್ರಾಯವನ್ನು ಹೇಗೆ ತಿಳಿಯಲಾದೀತು! ಆದರೂ ಅವರ ಸ್ವರ ಮಾಧುರ್ಯವು ಪ್ರಪಂಚವನ್ನೆಲ್ಲ ಸಂತೋಷಸಮುದ್ರದ ತಲವನ್ನು ಹಿಡಿಯುವಂತೆ ಮಾಡಿತು. ಭೂಮಿಯ ಮೇಲೆ ಸದ್ದಿಲ್ಲ. ಆಕಾಶದಲ್ಲಿ ಸದ್ದಿಲ್ಲ. ತಾರೆಗಳಿಗೆ ಕೂಡ ಚಲನೆಯಿಲ್ಲ. ಆ ಇಭ್ಭಾಗವಾದ ಆಕಾಶ ಗಂಗೆಯು ಹಾಗೆಯೇ ಬಾಯಿಬಿಟ್ಟುಕೊಂಡಿದೆ. ಎಲ್ಲಿ ನೋಡಿದರೂ ಶಾಂತಿ. ಪ್ರಪಂಚವೇ ಗಾಢನಿದ್ರೆಯಲ್ಲಿದ್ದ ಹಾಗೆ ಇದೆ.

ಆಗ ಋಭುಗಳು ಒಂದೇ ಸ್ವರದಿಂದ ಗಾನಮಾಡಿದರು. ಅವರ ಸಂಗೀತದ ಧಾಟಿಯು ಭೂಮಂಡಲವನ್ನೂ ವಾಯುಮಂಡಲವನ್ನೂ ತುಂಬಿ ದಿಗಂತಗಳನ್ನು ತೂರಿಕೊಂಡು ಆ ಆಕಾಶಗಂಗೆಯನ್ನೂ ದಾಟಿ ಎಲ್ಲಿಗೆ ಹೋಗಿ ಲೀನವಾಯಿತೋ ಯಾರಿಗೂ ತಿಳಿಯದು. ಭೂಚರರು, ಖೇಚರರು—ಎಲ್ಲರೂ ಅದನ್ನು ಕೇಳಿದರು. ಆ ಗಾನ ದಿಂದ ಸಮಸ್ತರ ಶ್ರೋತ್ರೇಂದ್ರಿಯಗಳಿಗೂ ಅಮೃತಧಾರೆಯ ಔತಣ ವಾಯಿತು. ಒಮ್ಮೆಗೇ ಬ್ರಹ್ಮಾನಂದವೇ ಅನುಭವಕ್ಕೆ ಬಂದಂತೆ ಎಲ್ಲರಿಗೂ ಏನೋ ಒಂದು ಏಕಪ್ರಕಾರವಾದ ಮತ್ತು ಚಿರಕಾಲಿಕ ವಾದ ಆನಂದವುಂಟಾಯಿತು. ಎಲ್ಲರಿಗೂ ಏನೋ ಒಂದು ಸ್ವಪ್ನ ದಂತೆ ಮತ್ತು ಅರ್ಧ ಎಚ್ಚರವೂ ಅರ್ಧ ಮರವೆಯೂ ಕೂಡಿದಂತೆ ಆಯಿತು. ಅತಿಮೋಹಕವಾದಂಥ ಅತಿಸುಖಕರವಾದಂಥ ಮೂದಸ್ಥ ವಾದ ಮಧುರಗಾನದಂತೆ ಆ ಗಾನವು ಕೇಳಿದವರ ಕಿವಿಗಳಲ್ಲೆಲ್ಲ ಧ್ವನಿಗೈದಿತು. ಈ ಆನಂದದ ಮೂಲವೇನೆಂಬುದು ಯಾರಿಗೂ ಗೊತ್ತಿಲ್ಲ. ಯಾರಿಗೂ ಎಚ್ಚರವಿಲ್ಲ.

ಸರ್ವಸಾಮಾನ್ಯಸ್ಥಿತಿ ಹೀಗಿದ್ದರೂ ಈ ಮಾಯಿಕವಾದ ಸ್ವಪ್ನ ದಲ್ಲಿ ಮೂವರು ಜಾಗರೂಕರಾಗಿ ಅಪರ ಅರ್ಥದ ಕಡೆಗೆ ಲಕ್ಷ್ಯವನ್ನು ಕೊಟ್ಟರು. ಅತಿದೂರದಲ್ಲಿ ಹುಟ್ಟುತ್ತಿದ್ದ ಆ ದೇವವಾಣಿಯು ತಮ್ಮ ಕಿವಿಗೆ ಅತಿಸ್ಪಷ್ಟವಾಗಿ ಕೇಳಿಸುವಷ್ಟು ಸಮೀಪವಾಗುವವರೆಗೂ ಅವರು ಅದರ ಮಾಧುರ್ಯದ ಸೆಳೆತಕ್ಕೆ ಸಿಕ್ಕಿ ಹಿಮಾಲಯ ಪರ್ವತದ ತುಟ್ಟತುದಿ ಗೇರಿದರು. ಹಿಮಾಲಯಕ್ಕೆ ಗೌರೀಶಂಕರ, ಧವಲಗಿರಿ ಮತ್ತು ಕಾಂಚನ ಗಂಗಾ ಎಂಬ ಮೂರು ಶಿಖರಗಳಿರುವಂತೆ ಈ ಭೂದೇವಿಗೆ ಮುಂದೆ ಹೇಳುವ ಆ ಮೂವರೂ ಮೂರು ಕಿರೀಟಗಳು. ಹಿಂದುಸ್ಥಾನದ ಮತ್ತು ಹಿಂದುಮತದ ಹೆಸರು ಪ್ರಪಂಚದಲ್ಲಿರುವವರೆಗೂ ಘನತೆಗೆ ಗೌರವ ವಿರುವವರೆಗೂ ಆ ಮೂವರ ಹೆಸರುಗಳು ಸುವರ್ಣಾಕ್ಷರಗಳಿಂದ ಚಿರ ಕಾಲ ಬೆಳಗುತ್ತಿರುವವು.



## ಮೂವರು ಮಹಾತ್ಮರು

ಆವರಲ್ಲಿ ಮೊದಲನೆಯವರು ಜ್ಞಾನಚಕ್ರವರ್ತಿಗಳಾದ ವಸಿಷ್ಠರು. ಇವರು ಜ್ಞಾನದ ಪರಾಕಾಷ್ಠಸ್ಥಿತಿಯನ್ನು ಕರತಲಾಮಲಕವಾಗಿ ಮಾಡಿಕೊಂಡಿದ್ದರು. ಇವರ ಪರ್ಣಶಾಲೆಯಲ್ಲಿ ಅರವತ್ತುಸಾವಿರ ಶಿಷ್ಯರು ವ್ಯಾಸಂಗವನ್ನು ಮಾಡುತ್ತಿದ್ದರು. ವೇದಗಳು,-ವೇದಾಂಗ ಗಳು, ಶಾಸ್ತ್ರಗಳು, ಪುರಾಣಗಳು, ಕಾವ್ಯಗಳು, ನಾಟಕಗಳು ಮೊದ ಲಾದ ನಾನಾವಿಧವಾದ ವಿದ್ಯೆಗಳಲ್ಲಿ ವಸಿಷ್ಠರ ಆಶ್ರಮದಲ್ಲಿ ಅಭ್ಯಾ ಸವು ನಡೆಯದೇ ಇದ್ದ ವಿದ್ಯೆಯೇ ಇಲ್ಲ. ಯಾರು ಯಾವ ಶಾಸ್ತ್ರ ದಲ್ಲಿ ಎಷ್ಟು ಬಗೆಯಾಗಿ ಪ್ರಶ್ನೆಮಾಡಿದರೂ ವಸಿಷ್ಠರು ಅವರಿಗೆಲ್ಲ ಸರ್ವಸಮರ್ಪಕವಾದ ಉತ್ತರವನ್ನು ಹೇಳುತ್ತಿದ್ದರು.

ಹೀಗೆ ಸರ್ವರೂ ಪಾಠಪ್ರವಚನಗಳ ಕಡೆಗೆ ಲಕ್ಷ್ಯವನ್ನು ಕೊಟ್ಟಿ ರುವಾಗ ಆ ದೇವಗಾನದ ಅಮೃತವೃಷ್ಟಿ ಸುರಿಯುತ್ತಲೇ ಎಲ್ಲರೂ ಒಮ್ಮೆಗೇ ದಿಗ್ಭ್ರಾಂತರಾದರು. ಒಬ್ಬರ ಮಾತು ಒಬ್ಬರಿಗೆ ಕೇಳದ

ಹಾಗೆ ಇದ್ದ ವಿದ್ಯಾಭ್ಯಾಸಘೋಷವು ಒಂದೇ ಸಲಕ್ಕೆ ತಣ್ಣಗಾಯಿತು. ಬೇರೆಬೇರೆ ಪುಸ್ತಕಪಙ್ಕ್ತಿಗಳ ಮೇಲೆ ಇದ್ದ ದೃಷ್ಟಿಗಳೆಲ್ಲ ಹಿಮಾಲಯದ ಅತ್ಯುನ್ನತ ಶಿಖರದ ಕಡೆಗೆ ಹರಿದವು. ಪಾಠಪ್ರವಚನದ ಮೇಲೆ ಏಕಾಗ್ರವಾಗಿದ್ದ ಅವರ ಮನಸ್ಸು ತಟ್ಟನೆ ಹಾರಿ ದೇವಗಾನದ ಮಾರ್ಗವನ್ನವಲಂಬಿಸಿತು. ಮಹಾಜ್ಞಾನಿಗಳಾದ ವಸಿಷ್ಠರು ಅದನ್ನು ಋಭುಗಳ ಗಾನವೆಂದು ದಿವ್ಯದೃಷ್ಟಿಯಿಂದ ತಿಳಿದು ಒಡನೆಯೇ ಯೋಗಬಲದಿಂದ ಅದರ ದಾರಿಯನ್ನು ಹಿಡಿದು ಹೋಗಿ ಕ್ಷಣಮಾತ್ರದಲ್ಲಿ ದೈವಶಕ್ತಿಯ ಬಲದಿಂದ ಋಭುಗಳ ಸಾಮೀಪ್ಯವನ್ನು ಹೊಂದಿ ಅವರಿಗೆರಗಿ ಆ ದೇವಗಾನಕ್ಕೆ ಕಿವಿಗೊಟ್ಟು ಕುಳಿತರು.

ಎರಡನೆಯವರು ಪರಾಕ್ರಮಚಕ್ರವರ್ತಿಗಳಾದ ವಿಶ್ವಾಮಿತ್ರರು. ಹಗಲೆಲ್ಲ ಅತ್ತಿತ್ತ ಯುದ್ಧಸಮಾರಂಭಕ್ಕಾಗಿ ಸೇನೆಯನ್ನು ನಡೆಸಿ ಅವರು ಆ ಸಾಯಂಕಾಲ ಹಿಮಾಲಯದ ತಪ್ಪಲಲ್ಲಿ ನಿಲ್ಲಬೇಕೆಂದು ಗೊತ್ತುಮಾಡಿಕೊಂಡಿದ್ದರು. ದಂಡಿನ ಜನರು ತಮತಮಗೆ ತೋರಿದ ಕಡೆ ತಮ್ಮತಮ್ಮ ಗುಡಾರಗಳನ್ನು ಹೊಡೆಯಬೇಕೆಂದು ಮೊದಲು ಮಾಡಿದ್ದರು. ಅನೇಕಕುದುರೆಗಳು ಹಗಲೆಲ್ಲ ದಣಿದು ಆಗತಾನೆ ಮೇವಿಗಾಗಿ ಬಾಯಾಡುತ್ತಿದ್ದವು. ವಿಶ್ವಾಮಿತ್ರರು ಮರುದಿನ ಸೇನೆಯನ್ನು ನಡೆಸಬೇಕಾದ ವಿಷಯವನ್ನು ಗೊತ್ತುಮಾಡುವದಕ್ಕಾಗಿ ಒಂದು ಸಣ್ಣ ಹಳ್ಳದ ಪಕ್ಕದಲ್ಲಿ ಏಂತಪರಿವಾರದಿಂದ ಕೂಡಿ ಕುಳಿತುಕೊಂಡಿದ್ದರು. ಆಗ ಆಕಾಶವೆಲ್ಲ ಝಗ್ಗನೆ ಪ್ರಭಾಮಯವಾಗಿ ಮಧುರಸ್ವರದ ಸೋನೆಯು ಸುರಿಯುತ್ತಲೇ ಗುಡಾರಗಳನ್ನು ಹೊಡೆಯುವವರು ಯಾರುಯಾರು ಎಲ್ಲೆಲ್ಲಿ ಹೇಗೆಹೇಗೆ ನಿಂತಿದ್ದರೋ ಅವರವರು ಅಲ್ಲಲ್ಲಿ ಹಾಗೆಹಾಗೆಯೇ ಚಿತ್ರಿಸಿದ ಬೊಂಬೆಗಳಂತಾದರು. ಅನೇಕಕುದುರೆಗಳು ಮೇವನ್ನು ಬಾಯಲ್ಲಿ ಕಚ್ಚಿಕೊಂಡು ಹಾಗೆಯೇ ಕಿವಿಗಳನ್ನು ನೆಟ್ಟಗೆ ಮಾಡಿಕೊಂಡು ಸದ್ದುಮಾಡದೆ ನಿಂತವು. ಹೀಗೆ ತಮ್ಮ ಪರಿವಾರದ ಜನರು ಬೆರಗಾಗಿ ಸುತ್ತುಮುತ್ತು ನೋಡುತ್ತಿರುವಷ್ಟರಲ್ಲಿಯೇ ಋಭುಗಳ ಗಾನದ ಸೆಳೆತಕ್ಕೆ ಸಿಕ್ಕಿದ ವಿಶ್ವಾಮಿತ್ರರು ತ್ರಿವಿಕ್ರಮನಂತೆ ಮೂರೇ ಹೆಜ್ಜೆಗಳಿಂದ ಹಿಮಾಲಯದಲ್ಲಿ ಅತ್ಯುನ್ನತವಾದ ಒಂದು

ಒಂಡೆಯು ಮೇಲಕ್ಕೇರಿದರು. ಆದರೆ ಅವರು ಹತ್ತಿರಕ್ಕೆ ಹೋದ ಹಾಗೆಲ್ಲ ಋಭುಗಳ ನೈಹೊಳಪಿನ ಮೇಲೆ ಸ್ವಲ್ಪ ಕತ್ತಲೆ ಕವಿದದ್ದ ರಿಂದ ಅವರು ಋಭುಗಳನ್ನು ಚೆನ್ನಾಗಿ ನೋಡುವದಕ್ಕಾಗಲಿಲ್ಲ.

ಮೂರನೆಯವನು ಚೋರಚಕ್ರವರ್ತಿಯಾದ ವಾಲ್ಮೀಕಿ. ಇವನು ತನ್ನ ಚೋರಕೂಟದೊಡನೆ ಆ ಪರ್ವತಸೀಮೆಯ ರಾಜರ ಅರಮನೆ ಗಳನ್ನು ಸೂರೆಮಾಡುವದಕ್ಕಾಗಿ ಅಲ್ಲಲ್ಲಿಯೇ ಅಡ್ಡಾಡುತ್ತಿದ್ದನು. ಆ ದಿನ ರಾತ್ರಿ ಅವನು ಒಬ್ಬ ರಾಜನ ಅರಮನೆಯನ್ನು ಮುತ್ತಿ ದ್ದನು. ಕಳ್ಳರ ಗಡಿಬಿಡಿಯಿಂದ ಅರ್ಧರಾತ್ರಿಯಲ್ಲಿ ಎಚ್ಚತ್ತ ರಾಜ ದೂತರಿಗೆ ದಿಕ್ಕು ತೋರದೆ ಹೋಯಿತು. ಈ ಮೃತ್ಯುವಿನಿಂದ ಪಾರಾಗುವ ಯೋಚನೆಯೇ ಅವರಿಗೆ ಹರಿಯಲಿಲ್ಲ. ಚೋರಕೂಟ ದವರು ರಾಜದೂತರನ್ನು ಕೊಚ್ಚಿ ಕೆಡಹುತ್ತ ಬಂದರು. ರಾಜದೂ ತರೂ ಕೆಲವರು ಕಳ್ಳರನ್ನು ಗಾಸಿಮಾಡಿದರು. ಈ ದಿಗ್ಭ್ರಮೆಯಲ್ಲಿ ಅವರು ಅನೇಕ ವೇಳೆ ತಮ್ಮತಮ್ಮ ಗುಂಪಿನವರನ್ನು ಕೂಡ ತಾವು ತಾವೇ ಬಲಿಗೊಡುತ್ತಲೂ ಇದ್ದರು. ವಾಲ್ಮೀಕಿಯು ತನ್ನ ಕತ್ತಿ ಯನ್ನು ತೆರವಿಲ್ಲದೆ ಬೀಸುತ್ತ ಆ ಸರಯಜ್ಞವು ಸಾಂಗವಾಗುವದಕ್ಕೆ ಅನುಕೂಲವಾದ ಆಜ್ಞೆಗಳನ್ನು ಶಂಖಧ್ವನಿಯಿಂದ ಸೂಚಿಸುತ್ತಿದ್ದನು. ಹೀಗಿರುವಾಗಲೇ ಆ ಪ್ರಭಾಪ್ರವಾಹವೂ ಸ್ವರದ ಝರಿಯೂ ಹರಿದು ಬಂದವು. ಕಳ್ಳರು ತಮ್ಮ ಸರಯಜ್ಞವನ್ನು ಅರ್ಧಕ್ಕೇ ಕೈಬಿಟ್ಟು ಬೆಪ್ಪಾಗಿ ಸುಮ್ಮನೆ ಮೇಲ್ಮುಖರಾಗಿ ನಿಂತರು. ಇದುವರೆಗೆ ಹೊಡೆ ದವರೂ ಹೊಡೆಸಿಕೊಂಡವರೂ ಇಬ್ಬರೂ ತಮ್ಮ ಸ್ಥಿತಿಗತಿಗಳನ್ನು ಮರೆತು ಮೋಹಪರವಶತೆಯಲ್ಲಿ ಸಮಾನತ್ವವನ್ನು ಪಡೆದರು. ವಾಲ್ಮೀ ಕಿಯು ಕಿವಿಯ ಪಾತ್ರವನ್ನು ವಿಸ್ತರಿಸಿಕೊಂಡು ಕ್ಷಣಕಾಲ ಆ ದೇವ ವಾಣಿಯನ್ನು ಸಾವಧಾನದಿಂದ ತುಂಬಿಕೊಂಡು ಅಷ್ಟಷ್ಟಕ್ಕೇ ಅದರ ಅರ್ಥಾನುಸಂಧಾನವನ್ನು ಮಾಡುತ್ತ ಹೋದನು. ಅವನ ಮನಸ್ಸಿಗೆ ಏನು ತೋರಿತೋ ಏನೋ! ಒಡನೆಯೇ ತಾನು ಚೋರವೃತ್ತಿಯ ಆಯುಧಗಳನ್ನೆಲ್ಲ ಅಲ್ಲಲ್ಲಿಯೇ ಬಿಸುಟು ಹಿಂದು ಮುಂದು ನೋಡದೆ ಪರ್ವತಾಗ್ರಕ್ಕೆ ಸರಸರನೆ ಹತ್ತಿದನು.

+∞++∞+

## ಋ ಭು ಗಾ ನ

ಸಂಗೀತಕ್ಕೆ ಯಾರು ತಾನೆ ಮರುಳಾಗುವದಿಲ್ಲ! ಒಬ್ಬ ಸಾಮಾನ್ಯ ಸಂಗೀತಗಾರನು ಮಧುರಸ್ವರವನ್ನು ಎತ್ತುತ್ತಲೇ ಯಾರು ತಾನೆ ಅದರ ರಮಣೀಯತೆಗೆ ಮನಸೋಲುವದಿಲ್ಲ? ಹೀಗಿರುವಾಗ ಹಾಡಿಕೆಯು ಆನಂದಭರಿತವಾದ ಹೃದಯದಿಂದ ಹೊರಬಿದ್ದು ಹರಿದು ಬರುತ್ತಿರುವಾಗ ಅದರ ಧಾಟಿಯು ಮನಸ್ಸನ್ನು ಮತ್ತೆಷ್ಟು ಪರವಶವಾಗಿ ಮಾಡುವಷ್ಟು ಮಧುರತರವಾಗಿರುವದಲ್ಲವೆ? ಯಾವನು ಅದನ್ನು ತಿಳಿಯಬಲ್ಲನೊ ಅವನು ಅದರ ಸೊಗಸನ್ನು ಅನುಭವಿಸುವನು. ಆ ಹಾಡು ಸ್ವರಮಾಧುರ್ಯದಿಂದ ಕಿವಿಗಳಿಗಿಂಪಾದುದು ಮಾತ್ರವೇ ಅಲ್ಲದೆ ಹೃದಯದೊಳಹೊಕ್ಕು ಅರ್ಥಗಾಂಭೀರ್ಯದಿಂದಲೂ ಮನಸ್ಸನ್ನು ಸೂರೆಮಾಡುವದಾಗಿದ್ದದ್ದರಿಂದ ಎಲ್ಲರೂ ಹಾಗಾದದ್ದೇನೂ ಆಶ್ಚರ್ಯವಲ್ಲ.

ಈ ರಾತ್ರಿ ಗಾಯಕರು ಋಭುಗಳು. ಅವರ ಗಾನವು ಜನ್ಮಭೂಮಿಯ ಮೇಲಿನ ಪ್ರೇಮಾವೇಶದ ಭರದಿಂದ ಹೊರಬಿದ್ದದ್ದಾಗಿದೆ. ಚತುಃಸಮುದ್ರಗಳಿಂದ ಪಾದಪ್ರಕ್ಷಾಲನೆಯನ್ನು ಮಾಡಿಸಿಕೊಳ್ಳುತ್ತ ಹಿಮಮಯವಾದ ಶುಭ್ರಕಿರೀಟದಿಂದ ಶೋಭಿಸುವ ಪರಮಪವಿತ್ರಯಾದ, ಫಲಪುಷ್ಪಪರಿಪೂರ್ಣಳಾದ ಭಾರತಭೂಮಿಯ ಕಡೆಗೆ ಅವರು ಎಷ್ಟೋ ಹೊತ್ತಿನ ಮೇಲೆ ಕಣ್ಣುಹಾಕಿ ನೋಡಿದಾಗ ಅವರಿಗೆ ಸಭಿಕರು ವಸಿಷ್ಠರು, ವಿಶ್ವಾಮಿತ್ರರು, ವಾಲ್ಮೀಕಿ. ಅವರು ಆ ಗಾನವನ್ನು ಕೇಳುತ್ತಾರೆ; ಅದರ ಅರ್ಥವನ್ನು ತಿಳಿಯುತ್ತಾರೆ; ಅದರಿಂಗ ಉಂಟಾದ ಆನಂದದಲ್ಲಿ ಮೈಮರೆಯುತ್ತಾರೆ! ಗಾಯಕರಿಗೆ ತಕ್ಕ ಸಭಿಕರು; ಸಭಿಕರಿಗೆ ತಕ್ಕ ಗಾಯಕರು! ಹೀಗೆ ಸೇರುವದು ಬಹು ಕಡಿಮೆ. ಈ ಸಂದರ್ಭದಲ್ಲಿ ಸಭಿಕರ ಸರ್ವೇಂದ್ರಿಯಗಳೂ ಮನಸ್ಸಿನೊಡಗೂಡಿ ಶ್ರೋತ್ರೇಂದ್ರಿಯದಲ್ಲಿ ಲೀನವಾಗಿ ಹೋಗಿವೆ.

ಆ ಗಾನದ ಝುರಿಯು ತುಂಬಿ ಹರಿಯುವಾಗ '**ಒಡಹುಟ್ಟಿದವರೆ**' ಎಂದು ಎಲ್ಲರನ್ನೂ ಕರೆಯುವಂತೆ ಕೇಳಿಸಿತು. ಆ ಋಭುಗಳು

ಪ್ರಪಂಚದಲ್ಲೆಲ್ಲ ಅತ್ಯುನ್ನತವಾದ ಪ್ರದೇಶದಲ್ಲಿ ನಿಂತು ಎರಡು ಕೈಗಳನ್ನೂ ಎತ್ತಿ ನೆಲದ ಮೇಲೆಯೂ ನೀರಿನ ಮೇಲೆಯೂ ವಾಯುವಿನ ಮೇಲೆಯೂ ಇರುವ ಸಮಸ್ತಜೀವಜಾತಿಯನ್ನೂ '**ಒಡಹುಟ್ಟಿದವರೆ**' ಎಂದು ಸಂಬೋಧನೆಮಾಡಿ ಆ ಪಲ್ಲವಿಯನ್ನು ಪ್ರತಿಜ್ಞಾಪೂರ್ವಕವಾಗಿ ಹೇಳುವ ಹಾಗೆ ತೋರಿತು. ಇದರಿಂದ ಸಭಿಕರ ಮನಸ್ಸಿನಲ್ಲೆಲ್ಲ '**ಒಡಹುಟ್ಟಿದವರೆ**' ಎಂಬ ಪ್ರತಿಧ್ವನಿಯ ಅಲೆ ಹುಟ್ಟಿತು. ಆ ಮೇಲೆ ಬ್ರಹ್ಮಾಂಡವೆಲ್ಲ ಆ ಪಲ್ಲವಿಯಿಂದ ತುಂಬಿಹೋಯಿತು. ಜನರ ಹೃದಯವೆಲ್ಲ ಕರಗಿ ಆ ಪಲ್ಲವಿಯ ರೂಪದಿಂದ ಹೊರಕ್ಕೆ ಹೊರಡುತ್ತಿರುವದೋ ಎಂಬಂತೆ ಎಲ್ಲರ ಹೃದಯಗಳಿಂದಲೂ ನಿರಂತರವೂ ಆ ಪಲ್ಲವಿಯು ಧಾರಾಕಾರವಾಗಿ ಹೊರಡುತ್ತಿತ್ತು.

ಏನಿದು ಭಗವಂತನ ಸಂವಿಧಾನ! ಏನು ವಿಲಕ್ಷಣವಾದ ಸಭೆ!! ಒಬ್ಬನು ಜ್ಞಾನಿ, ಒಬ್ಬನು ವೀರ; ಒಬ್ಬನು ಕಳ್ಳ. ಹೀಗೆ ಪರಸ್ಪರ ವಿರುದ್ಧಸ್ವಭಾವವುಳ್ಳ ಈ ಪ್ರತಿಯೊಬ್ಬರ ಮನೋವೃತ್ತಿಯೂ ತನ್ನ ಸಹಜಸ್ಥಿತಿಯನ್ನು ಮರೆತು ಒಂದು ಪಲ್ಲವಿಗೆ ಮರುಳಾಯಿತು. ಅವರು ಆ ಗಾನಕ್ಕೆ ತಾಲವನ್ನು ಹಾಕುವದಕ್ಕಾರಂಭಿಸಿದರು.

## ಆಮೇಲೆ

ಆಮೇಲೆ ಆ ಮೂವರೂ ಬಹುಕಾಲ ಮೈಮರೆತಿದ್ದರು. ಆದರೆ ಒಳಗೇ ಒಂದು ಚಿಂತಾಪ್ರವಾಹವು ಹರಿಯುತ್ತಿತ್ತು. ಋಭುಗಾನದಲ್ಲಿ ಮುಳುಗಿಹೋಗಿದ್ದ ಅವರ ಮನಸ್ಸಿನೊಳಕ್ಕೆ ಬೇರೆ ಯಾವ ಯೋಚನೆಯೂ ಬರುವ ಹಾಗೆ ಇರಲಿಲ್ಲ. ಪಲ್ಲವಿಯ ರೂಪವಾಗಿ ಕರಗಿ ಹರಿದು ಹೋಗುತ್ತಿದ್ದ ಮನಸ್ಸು ಕಾಲಕ್ರಮವಾಗಿ ಸಮಾಧಾನಸ್ಥಿತಿಗೆ ಬರುತ್ತ ಬರುತ್ತ ಅವರ ಮನಸ್ಸಿನಲ್ಲಿ ವಿಚಾರಾಂತರಗಳ ಕಲ್ಪನೆಗೆ ಮೊದಲಾಯಿತು.

ವಸಿಷ್ಠರ ಮನಸ್ಸಿನಲ್ಲಿ "ನಾನು ಬ್ರಹ್ಮತೇಜೋಬಲದಿಂದ ಬ್ರಾಹ್ಮಣರ ಮತ್ತು ಕ್ಷತ್ರಿಯರ ಪರಸ್ಪರಭೇದಭಾವಗಳನ್ನು ವಿಚಾರ

ದಿಂದ ಪರಿಗೊಳಿಸಿ ಬಹುಮಟ್ಟಿಗೆ ಒಂದು ಮಾಡಿರುತ್ತೇನೆ. ಚತುರ್ವರ್ಣ ಗಳಲ್ಲಿ ಇವೇ ಪ್ರಬಲವಾದವುಗಳು. ಉಳಿದವುಗಳ ವಿಚಾರವು ಅಷ್ಟು ಮಹತ್ತ್ವದ್ದಲ್ಲ. ಇವೆರಡು ವರ್ಣಗಳವರು ಪರಸ್ಪರಸಹೃದಯರಾದರೆ ಲೋಕದಲ್ಲೆಲ್ಲ ಜನಮಂಡಲಿಯಲ್ಲಿ ಸರ್ವಸಾಮಾನ್ಯವಾಗಿ ಒಕ್ಕಟ್ಟು ನೆಲೆಗೊಂಡಂತೆಯೇ ಆಯಿತು. ಋಭುಗಳ ನಿರೀಕ್ಷಣೆಯು ನನ್ನ ವಿದ್ಯಾಪ್ರಭಾವದಿಂದ ನೆರವೇರಿದ ಹಾಗೆಯೇ ಆಗಿದೆ'' ಎಂಬ ಅಹಂಕಾರವು ಹಬ್ಬಿಕೊಂಡಿತು.

ವಿಶ್ವಾಮಿತ್ರರಿಗೆ ''ನನ್ನ ಈ ಬಾಹುಬಲದಿಂದ ಪ್ರಪಂಚವನ್ನೆಲ್ಲ ಗೆದ್ದಿರುವೆನು. ಬಹುಮಟ್ಟಿಗೆ ಮನುಷ್ಯವರ್ಗವೆಲ್ಲ ಈಗ ನನ್ನ ಒಂದೇ ಪ್ರಭುತ್ವದ ಕೆಳಗೆ ಅವಿಭಕ್ತಕುಟುಂಬದಂತೆ ಇರುವದರಿಂದ ಎಲ್ಲೆಲ್ಲಿಯೂ ಒಕ್ಕಟ್ಟು ನೆಲೆಗೊಂಡಂತೆಯೇ ಆಗಿದೆ. ಋಭುಗಳ ನಿರೀಕ್ಷಣೆಯು ನನ್ನ ವೀರತ್ವಪ್ರಭಾವದಿಂದ ನೆರವೇರಿದ ಹಾಗೆಯೇ ಆಗಿದೆ'' ಎಂಬ ಸೊಕ್ಕು ತಲೆಗೇರಿತು.

ಇನ್ನು ವಾಲ್ಮೀಕಿಗೇನು ತೋರಿರಬಹುದು? ಅವನು ತನ್ನ ಮನಸ್ಸಿನಲ್ಲಿ ತಾನೇ ''ನಾನೇನು ಮಾಡುತ್ತಿದ್ದೇನೆ? ನನ್ನ ಒಡಹುಟ್ಟಿದವರನ್ನೆ ನಾನು ಕೊಲ್ಲುತ್ತಿದ್ದೇನಲ್ಲ!'' ಎಂದು ಅವನ ಮನಸ್ಸು ಕುದಿಯುವದಕ್ಕಾರಂಭಿಸಿತು.

ಇವರ ಈ ಬೇರೆಬೇರೆ ಭಾವನೆಗಳು ಆಗ ಯಾರಿಗೂ ತಿಳಿಯಲಿಲ್ಲ.

## ಋಭುಗಳು ಮೈಗರೆಯುವದು

ಹೀಗಿರುವಾಗ ಸುತ್ತಲೂ ಹರಡಿಕೊಂಡಿದ್ದ ಉಜ್ಜ್ವಲವಾದ ಪ್ರಭೆಯು ಕ್ರಮಕ್ರಮವಾಗಿ ಮೈಗರೆಯುವ ಹಾಗೆ ಕಂಡಿತು. ಆಗ ಆ ಇಬ್ಬರು ಮಹಾತ್ಮರೂ ನಿಟ್ಟಿಸಿ ನೋಡಿದರು. ರಾಶಿಚಕ್ರವೇ ಒಂದು ವಿಲಕ್ಷಣವಾದ ರೀತಿಯಲ್ಲಿ ಚಲಿಸುತ್ತಿರುವಂತೆ ಕಂಡಿತು.

ಚೆನ್ನಾಗಿ ನೋಡಲಾಗಿ ಋಭುಗಳು ಹಿಮಾಲಯದ ಶಿಖರಗಳನ್ನು ಬಿಟ್ಟು ಊರ್ಧ್ವಗತಿಯನ್ನೈದುತ್ತಿದ್ದಾರೆಂದು ತಿಳಿಯಿತು. ಋಭುಗಳು ತೀರ ಮೇಲಕ್ಕೆ ಹೋದಾಗ ಆಕಾಶದ ಇಬ್ಭಾಗವು ಅವರನ್ನು ಎತ್ತಿ ಕೊಂಡು ದಿವ್ಯಲೋಕಕ್ಕೆ ಸಾಗಿಸಿತು. ಒಡನೆಯೇ ಬ್ರಹ್ಮಾಂಡವನ್ನೇ ನುಂಗುವಂತಿದ್ದ ಆ ಆಕಾಶರಂಧ್ರವನ್ನು ವಿಧವಿಧವಾದ ಆಕಾರಗಳುಳ್ಳ ಅಸಂಖ್ಯಾಕಶುಭ್ರಮೇಘಪಙ್ಕ್ತಿಗಳು ತುಂಬುತ್ತಬಂದವು. ಎಷ್ಟೆಷ್ಟು ಮೇಘಪಙ್ಕ್ತಿಗಳು ಬಂದು ಬಿದ್ದರೂ ಆ ಮಹಾರಂಧ್ರವು ಎಲ್ಲವನ್ನೂ ನುಂಗುತ್ತಿತ್ತು. ಎಷ್ಟು ಹೊತ್ತು ನೋಡುತ್ತಿದ್ದರೂ ಏಕಪ್ರಕಾರ ವಾಗಿ ಹೀಗೆಯೇ ಆಗುತ್ತಲೇ ಇದ್ದದ್ದರಿಂದ ಆ ಮಹಾರಂಧ್ರವು ತುಂಬಿದ್ದೂ ತುಂಬದೆ ಇದ್ದದ್ದೂ ಎರಡೂ ಗೊತ್ತಾಗದೆ ಇತ್ತು. ಈ ನೋಟವು ವಿರಾಡ್ರೂಪವನ್ನು ಹೊಂದಿದ ಶ್ರೀಮನ್ನಾರಾಯಣನ ಮುಖದಲ್ಲಿ ಸಮಸ್ತಬ್ರಹ್ಮಾಂಡಗಳೂ ಪ್ರವೇಶಿಸುತ್ತಿರುವ ಹಾಗೆ ದ್ವಾಪರಯುಗದ ಕೊನೆಕೊನೆಯಲ್ಲಿ ಅರ್ಜುನನು ಕಂಡ ನೋಟವನ್ನು ಜ್ಞಾಪಿಸುತ್ತಿತ್ತು. ಬಹು ಹೊತ್ತು ಹೀಗೆ ನಡೆದ ಮೇಲೆ ಪ್ರಪಂಚವು ಪೂರ್ವಸ್ಥಿತಿಯಲ್ಲಿ ಕಾಣುವದಕ್ಕೆ ಮೊದಲಾಯಿತು. ನಕ್ಷತ್ರಗಳು ಮತ್ತೆ ಹೃದಯಂಗಮವಾಗಿ ಬೆಳಗಿದವು. ಆಕಾಶದ ನೀಲವರ್ಣವು ಮೈಗೂಡಿತು. ಭೂಮಂಡಲದ ಮೇಲೆ ಬೆಳಗಾಗಿ ಕಾಗೆಗಳು ಮತ್ತು ಕೋಳಿಗಳು ಕೂಗಲಾರಂಭಿಸಿದವು.

ಹೀಗೆ ಋಭುಗಳು ವೈಗರೆಯುತ್ತಲೆ ಆ ಮೂವರಿಗೂ ದಿಕ್ಕು ತೋರದಂತಾಯಿತು. ಆದರೂ ಋಭುಗಳ ಹಾಡಿನ "**ಒಡಹುಟ್ಟಿದವರೆ**" ಎಂಬ ಪಲ್ಲವಿಯು ಮಾತ್ರ ಅವರ ಕಿವಿಗಳಲ್ಲಿ ಗುಯಿಗುಯಿ ಗುಟ್ಟುತ್ತಲೇ ಇತ್ತು. ಆ ಮೂವರ ಮನಸ್ಸಿನಲ್ಲಿ ಇದುವರೆಗೆ ಗುಪ್ತ ಗಾಮಿನಿಯಾಗಿದ್ದ ಬೇರೆಬೇರೆ ಭಾವನೆಗಳೆಲ್ಲ ಈಗ ಅವರ ಮನಸ್ಸಿನ ತಲವನ್ನೇ ಕಲಕಿಬಿಟ್ಟವು. ಈ ಸಂಭ್ರಮದಲ್ಲಿ ಅವರು ಕೆಲವು ಹೊತ್ತು ನಿಶ್ಚೇಷ್ಟರಾದರು. ಆದರೂ "**ಒಡಹುಟ್ಟಿದವರೆ**" ಎಂಬ ಪಲ್ಲವಿಯು ಮಾತ್ರ ಅವರ ಕಿವಿಗಳಲ್ಲಿ ಧ್ವನಿಗೈಯುತ್ತಲೇ ಇದೆ.

—

# ವಿಚಾರದ ಮೇಲೆ ವಿಚಾರ

ಇತ್ತ ವಸಿಷ್ಠರ ತೊಳಲಿಕೆಯೇನೆಂದರೆ—“ಬುದ್ಧಿಶಕ್ತಿಗೆ ಯಾವದು ತಾನೆ ಮೀರಿದ್ದು! ನಾನು ಕ್ಷತ್ರಿಯರನ್ನೆಲ್ಲ ಸುಲಭವಾಗಿ ಒಳಗು ಮಾಡಿಕೊಂಡೇ ಬಿಟ್ಟಿದ್ದೇನೆ. ಉಳಿದ ಜಾತಿಗಳನ್ನು ಒಕ್ಕಟ್ಟಿಗೆ ತರು ವದೊಂದುಳಿದಿದೆ. ಎಲ್ಲರೂ ‘**ಒಡಹುಟ್ಟಿದವರೆ**’ಂದು ಋಭುಗಳು ಹೇಳುವದು ನಿಜ. ಹಾಗೆ ಒಕ್ಕಟ್ಟನ್ನು ಸಾಧಿಸಬೇಕು. ನಾನು ಎಲ್ಲ ಶಾಸ್ತ್ರಗಳನ್ನೂ ಮಗುಚಿಹಾಕಿದ್ದೇನೆ. ಬ್ರಹ್ಮತೇಜಸ್ಸಿಗೆ ಯಾವದೂ ಅಸಾಧ್ಯವಲ್ಲ. ಮತ್ತೊಮ್ಮೆ ಋಭುಗಳ ದರ್ಶನವಾದರೆ ಎಲ್ಲರೂ ‘**ಒಡಹುಟ್ಟಿದವರೆ**’ಂಬ ಪಲ್ಲವಿಯನ್ನು ಇನ್ನೊಮ್ಮೆ ಅವರೊ ಡನೆ ಹಾಡಬೇಕು. ಯಾವ ಕಾರ್ಯಕ್ಕಾದರೂ ಬುದ್ಧಿಯೂ ಶಾಸ್ತ್ರವೂ ಸಾಧನೆಗಳು. ಆದ್ದರಿಂದ ಈ ಪ್ರಪಂಚದಲ್ಲಿ ನನಗೆ ಜಯವು ದೊರೆ ಯಲೇ ಬೇಕು.”

ವಿಶ್ವಾಮಿತ್ರರ ಹಂಬಲಿಕೆಯೇನೆಂದರೆ—“ಏನು ಋಭುಗಳು! ಏನು ಗಾಯನ! ಏನು ಸೌಂದರ್ಯ! ನಿಜವಾಗಿ ನಾನು ಸದ್ವೈವಿ ಯಲ್ಲವೆ? ಸಂಶಯವೇಕೆ? ಒಂದು ದಿನ ನಾನೂ ಅವರ ಪದವಿಗೇರುವೆ ನೆಂದು ನನಗೆ ನಂಬಿಕೆ ಇದೆ. ನನ್ನ ಪ್ರಯತ್ನಕ್ಕೆ ಯಾವದೂ ಹೊರ ತಲ್ಲ. ನಾನು ವಿಶ್ವಾಮಿತ್ರ! ಈ ಪ್ರಪಂಚವನ್ನೇ ಜಯಿಸಿ ನನ್ನ ಹಿಡಿಯೊಳಗಿಟ್ಟುಕೊಂಡು ಒಕ್ಕಟ್ಟುಮಾಡಿಬಿಡುತ್ತೇನೆ. ಜಗತ್ತಿನ ಲ್ಲೆಲ್ಲ ಎಲ್ಲರೂ ‘**ಒಡಹುಟ್ಟಿದವರೆ**’ಂಬ ಹಾಡನ್ನು ಹಾಡಿಸಿಬಿಡು ತ್ತೇನೆ. ಈ ಕೆಲಸವನ್ನು ಮಾಡಿದರೇ ನಾನು ವಿಶ್ವಾಮಿತ್ರ!”

ವಾಲ್ಮೀಕಿಯ ಚಿಂತೆಯೇನೆಂದರೆ—“ಋಭುಗಳ ಅಭಿಪ್ರಾಯ ದಂತೆ ನೋಡಿದರೆ ಜನರೆಲ್ಲರೂ ಪರಸ್ಪರಸಹೋದರಸಮಾನರಾಗಿರು ವಾಗ ಆಹಾ! ನಾನು ಎಷ್ಟುಜನ ಸಹೋದರಿಯರ ತಲೆಯನ್ನು ಬೋಳುಮಾಡಿದೆನು! ಮುಂದೆ ಬಾಳಿ ಬದುಕುತ್ತಿದ್ದ ಎಷ್ಟುಜನ ಮಕ್ಕಳುಮರಿಗಳನ್ನು ಕೊಂದೆನು! ಎಷ್ಟುಜನ ಸಂಭಾವಿತರ ಮನೆ ಮಾರುಗಳನ್ನು ಹಾಳುಮಾಡಿದೆನು! ಎಷ್ಟುಜನ ಸಾತ್ತ್ವಿಕರ ನೆಮ್ಮ

ದಿಗೆ ಭಂಗವನ್ನುಂಟುಮಾಡಿದೆನು! ಮನುಷ್ಯರೂಪಿನಲ್ಲಿದ್ದರೂ ಎಷ್ಟು ಜನರಿಗೆ ಯಮಸ್ವರೂಪನಾಗಿ ಕಾಣಿಸಿಕೊಂಡೆನು! ಎಲೆ, ನೀಚ ವಾಲ್ಮೀಕಿ, ಎಲೆ, ಭ್ರಷ್ಟವಾಲ್ಮೀಕಿ, ಎಲೆ, ಕಳ್ಳವಾಲ್ಮೀಕಿ, ನಿನ್ನಂತಿರುವ ಲಕ್ಷಾಂತರಜನರ ಎದೆ ಬಿರಿಯುವಂತೆ ಪರಮಪಾಪಕೃತ್ಯಗಳನ್ನು ಮಾಡಿದ ನಿನ್ನ ಎದೆಯು ಇನ್ನೂ ಬಿರಿದುಹೋಗದೆ ಕಲ್ಲಾಗಿರುವದಲ್ಲ! ಲಕ್ಷಾಂತರಜನರ ತಲೇಬುರುಡೆಗಳನ್ನು ಚೆಂಡಾಡುವಂತೆ ಹಾರಿಸಿದ ನಿನ್ನ ತಲೆಯು ಇನ್ನೂ ಕಚ್ಚಿಕೊಂಡಿರುವದಲ್ಲ!! ಸಮಸ್ತ ಸಹೋದರರ ಸರ್ವಸ್ವವನ್ನೂ ಸೂರೆಮಾಡಿದ ನಿನ್ನ ಪಾಲಿಗೆ ಪಾಪವೊಂದಲ್ಲದೆ ಮತ್ತೇನುಳಿದಿರುವುದು? ಜಗದೀಶ್ವರನಾದ ಈಶ್ವರನೆಂಬ ತಂದೆಗೆ ಜೀವಿಗಳೆಲ್ಲರೂ ಸಮಾನಪ್ರೀತಿಪಾತ್ರರಾದ ಮಕ್ಕಳಲ್ಲವೆ? ಆದ್ದರಿಂದ ಪ್ರಪಂಚದ ಸರ್ವಮನುಷ್ಯರೂ ಸಹೋದರಸಮಾನರಲ್ಲವೆ? ಪ್ರಪಂಚವೆಲ್ಲ ಭಗವಂತನ ಏಕಕುಟುಂಬವಲ್ಲವೆ? "ಕುಲಕ್ಕೆ ಮೃತ್ಯು ಕೊಡಲಿಯ ಕಾವು" ಎಂಬಂತೆ ನಮ್ಮ ಸಹೋದರರಿಗೆ ನಾನೇ ಮೃತ್ಯುವಾದೆನಲ್ಲ! ಎಲ್ಲರೂ ಸಹೋದರಸಮಾನರಾಗಿರುವಾಗ ಯಾರನ್ನು ಕೊಂದು ಯಾರು ಬದುಕಬೇಕು? ಅಯ್ಯೋ ದುರ್ದೈವವೇ! ಈ ರಹಸ್ಯಾರ್ಥವು ನನಗೆ ಇದುವರೆಗೆ ತಿಳಿಯದೆ ಹೋಯಿತಲ್ಲ! ಈಗ ನನ್ನ ದುಷ್ಕೃತ್ಯಕ್ಕೆ ತಕ್ಕ ಪ್ರಾಯಶ್ಚಿತ್ತವೇನು? ಛೆ! ಪ್ರಾಯಶ್ಚಿತ್ತವೆ? ಶಾಸ್ತ್ರಗಾರನಿಗೆ ಇದುವರೆಗೆ ನನ್ನಂಥ ಪಾತಕಾಗ್ರಣಿಯು ಒಬ್ಬನಾದರೂ ಸಿಕ್ಕಿದ್ದರೆ ಅವನು ನನಗೆ ತಕ್ಕ ಪ್ರಾಯಶ್ಚಿತ್ತವನ್ನು ಬರೆದಿಡುತ್ತಿದ್ದನು. ಅಥವಾ ನನ್ನಂಥ ಪಾಪಿಗೆ ಪ್ರಾಯಶ್ಚಿತ್ತವನ್ನು ವಿಧಿಸುವ ಯೋಗ್ಯತೆ ಯಾವ ಶಾಸ್ತ್ರಗಾರನಿಗೆ ತಾನೇ ಉಂಟು? ಅಯ್ಯೋ ದುಷ್ಟ, ದುರುಳ, ವಾಲ್ಮೀಕಿ, ನಿನ್ನನ್ನು ನೋಡಿದೊಡನೆಯೆ ನಿನ್ನ ಒಡಹುಟ್ಟಿದವರೆಲ್ಲ ಹೆದರಿ ಓಡಿಹೋಗುವರಲ್ಲ! ಹೇ, ದೇವ, ಈ ಕೆಟ್ಟಬಾಳಿನಿಂದ ಹಾಳಾಗುತ್ತಿರುವೆನಲ್ಲ!" ಎಂಬುದು. ಹೀಗೆ ನಿಟ್ಟುಸಿರಿಡುತ್ತಿದ್ದ ಅವನ ಕಣ್ಣುಗಳಿಗೆ ಕತ್ತಲೆಯಡರಿತು. ಗರಗರನೆ ತಲೆತಿರುಗಲು ಅವನು ಧೊಪ್ಪನೆ ನೆಲದ ಮೇಲೆ ಬಿದ್ದನು. ಎದೆ ಮಾತ್ರ ಬಡಿದುಕೊಳ್ಳುತ್ತಿತ್ತು. ಕಣ್ಣೀರುಗಳು ಬಿಸಿನೀರಿನ ಬುಗ್ಗೆಯಂತೆ ಹರಿದು ಬರುತ್ತಿದ್ದವು.

## ಫಲಿತಾಂಶ

ಎಷ್ಟುಕಾಲ ಅವರ ಮನಸ್ಸು ಹಾಗೆ ತಳಮಳಿಸುತ್ತಿತ್ತೋ ಯಾರಿಗೂ ತಿಳಿಯದು. ಋಭುಗಳಿಂದ ಬಂದ ವಿದ್ಯುಚ್ಛಕ್ತಿಯಂಥ ಸಮೀಪಪ್ರೇರಣೆಯು ಅವರ ಹೃದಯವನ್ನು ಎಷ್ಟುಕಾಲ ಅಲ್ಲೋಲಕಲ್ಲೋಲ ಸ್ಥಿತಿಯಲ್ಲಿಟ್ಟಿತ್ತೋ ಯಾರು ಊಹಿಸಬಲ್ಲರು ? ಕೊನೆಗೆ ಅದು ಶಾಂತ ಸ್ಥಿತಿಗೆ ಬಂದು ಅವರ ಇಂದ್ರಿಯಗಳಿಗೆ ಬಹಿಃಪ್ರಪಂಚವ್ಯಾಪಾರವು ಹತ್ತುವದಕ್ಕೆ ಮೊದಲಾಯಿತು. ಆಗ ಅವರಿಗೆ ಎಲ್ಲವೂ ಬೇರೆ ಬಗೆಯಾಗಿ ಕಂಡವು. ಸೂರ್ಯನು ಶರತ್ಕಾಲದ ಆಕಾಶದಲ್ಲಿ ಉದಯಗೊಂಡಿದ್ದನು. ನಕ್ಷತ್ರಗಳು ಅಲ್ಲಲ್ಲಿಯೇ ಅಡಗಿಕೊಳ್ಳುತ್ತಿದ್ದವು. ಪ್ರಾತಃಕಾಲದ ಶೀತಲವಾದ ಗಾಳಿಯು ಅವರ ಮನಸ್ಸನ್ನು ಉತ್ಸಾಹಗೊಳಿಸಿತು. ಬುಗ್ಗೆಗಳ ಪ್ರವಾಹಧ್ವನಿಯು ಅವರ ಕಿವಿಗಳಿಗೆ ಹಬ್ಬವನ್ನುಂಟುಮಾಡಿತು. ಆ ರಾತ್ರಿಯ ವೃತ್ತಾಂತವೆಲ್ಲ ಅವರಿಗೊಂದು ಸತ್ಯವಾದ ಸ್ವಪ್ನದಂತೆ ತೋರಿತು.

ಆಗ ವಸಿಷ್ಠರು ತಮಗೆ ಶಾಂತಿ ತೋರುತ್ತಲೆ ತಮ್ಮ ತಪೋಬಲದ ಸಹಾಯದಿಂದ ಎಲ್ಲರೂ "**ಒಡಹುಟ್ಟಿದವರು**" ಎಂಬ ಒಕ್ಕಟ್ಟನ್ನು ಸಾಧಿಸುವೆವೆಂದು ಬಲವಾದ ಆಶೆಯನ್ನು ಹೊಂದಿದ್ದಾರೆ. ವಿಶ್ವಾಮಿತ್ರರು ಆ ಕೆಲಸವನ್ನು ಬಾಹುಬಲದಿಂದ ಪೂರ್ಣವಾಗಿ ಸಾಧಿಸುತ್ತೇವೆಂದು ಗುಣಾಕಾರವನ್ನು ಹಾಕಿದ್ದಾರೆ. ಆದರೂ ಅವರಿಗೆ ಅಷ್ಟಿಷ್ಟು ನಡುನಡುವೆ ಎದೆಯಳುಕುತ್ತಿದೆ. ವಾಲ್ಮೀಕಿಯ ಮನಸ್ಸಿಗೆ ಮಾತ್ರ ಶಾಂತಿಯಿಲ್ಲ. ಅವನ ಹೃದಯವೆಲ್ಲ ಬೆಂದು ಬೇಗುದಿಗೊಂಡಿದೆ. ಕಳ್ಳರ ಕೂಟಕ್ಕೆ ಮತ್ತೆ ಸೇರಲು ಮನಸ್ಸು ಒಗ್ಗದು. ತನ್ನ ಇದುವರೆಗಿನ ಪಾಪಕ್ಕಾಗಿ ಅಳುತ್ತ ಅವನು ಇದಕ್ಕೇನು ಮಾಡಬೇಕೆಂದು ಹೊರಟಿದ್ದಾನೆ. ವಸಿಷ್ಠರು ಬೆಳಗಿನ ನಿತ್ಯಕರ್ಮಗಳನ್ನು ತೀರಿಸಲು ಆಶ್ರಮದ ದಾರಿಯನ್ನು ಹಿಡಿದಿದ್ದಾರೆ. ಭೂಮಿಯು ನಡುಗುವಂತೆ ವಿಶ್ವಾಮಿತ್ರರು ಜಗ್ಗುಹಾಕುತ್ತ ಇಳಿಯುತ್ತಿದ್ದಾರೆ. ಸ್ವಲ್ಪ ದೂರದ ಮೇಲೆ ಅವರಿಬ್ಬರಿಗೂ ಸಮಾಗಮವಾಗಿದೆ.

# ಎರಡನೆ ಸನ್ನಾಹ



## ವಸಿಷ್ಠವಿಶ್ವಾಮಿತ್ರರ ಸಮಾಗಮ

ವಸಿಷ್ಠವಿಶ್ವಾಮಿತ್ರರಿಬ್ಬರೂ ತಮ್ಮ ಪಾದಸಂಘಟ್ಟನಗಳಿಂದ ಪರ್ವತವು ಕಂಪಿಸುತ್ತಿರಲು ದಡದಡನೆ ಇಳಿಯುವದಕ್ಕೆ ಮೊದಲುಮಾಡಿದರು. ದಾರಿಯಲ್ಲಿ ಇವರ ಶುಭಾಗಮನವನ್ನು ಬಯಸಿ ಕೈಗಳನ್ನು ನೀಡಿರುವಂತೆ ದೊಡ್ಡದೊಡ್ಡ ಮರಗಳ ಶಾಖೋಪಶಾಖೆಗಳು ಉದ್ದವಾಗಿ ನೀಡಿಕೊಂಡಿದ್ದವು. ನಾನಾವರ್ಣದ ಚಿಕ್ಕಚಿಕ್ಕ ಹಕ್ಕಿಗಳು ತಮ್ಮ ಮನೋಹರವಾದ ಆಕಾರದಿಂದಲೂ ಮಧುರವಾದ ಸ್ವರದಿಂದಲೂ ಆ ಪ್ರಯಾಣಿಕರಿಗೆ ಆನಂದವನ್ನುಂಟುಮಾಡಿದವು. ಮರಗಳಿಗೆ ಸುತ್ತಿಕೊಂಡಿದ್ದ ಬಳ್ಳಿಗಳು ಅವರ ಮೇಲೆ ಹೂವಿನ ಮಳೆಯನ್ನು ಸುರಿಸಿದವು. ಗಳಗಳ ಶಬ್ದದಿಂದ ಹರಿಯುತ್ತಿರುವ ಸಣ್ಣಸಣ್ಣ ಕಾಡುಹಳ್ಳಗಳು ಅಲೆಗಳೆಂಬ ತಮ್ಮ ಕೈಗಳಿಂದ ಹೆಜ್ಜೆಹೆಜ್ಜೆಗೂ ಅವರ ದಾರಿಯನ್ನು ಚೊಕ್ಕಟಮಾಡಿದವು. ಅತ್ಯಂತ ಕಡಿದಾದ ಮತ್ತು ಅಳೆಯಲಸಾಧ್ಯವಾದಷ್ಟು ಎತ್ತರವಾದ ಶಿಖರಗಳನ್ನುಕೂಡ ಅವರು ಅತ್ಯಂತ ಸುಲಭವಾಗಿ ದಾಟಿದರು. ಮೇಘಮಂಡಲವನ್ನು ನುಗ್ಗಿಕೊಂಡು ಹೋಗಿರುವ ಪರ್ವತರಾಜಿಯೊಂದು ಕಡೆ; ಸಮವಾದ ಹುಲ್ಲುಗಾವಲೊಂದುಕಡೆ. ಇವೆರಡರ ನಡುವೆ ಇಳಿದು ಬರುತ್ತಿದ್ದ ದೀರ್ಘದೇಹಿಗಳಾದ ಅವರನ್ನು ನೋಡಿದರೆ ಹಿಮಾಚಲದಿಂದ ಎರಡು ಹಿಮರಾಶಿಗಳು ಸೂರ್ಯಕಿರಣಗಳ ಪ್ರತಿಬಿಂಬದೊಡನೆ ಪ್ರಕಾಶಿಸುತ್ತ ಒಂದೇ ಸಮವಾಗಿ ಕೆಳಕ್ಕೆ ಜಾರಿ ಬರುತ್ತಿರುವಂತೆ ಕಾಣುತ್ತಿತ್ತು.

ಕೆಳಕೆಳಕ್ಕೆ ಬರುತ್ತ ಬರುತ್ತ ಅವರಿಬ್ಬರೂ ಸೇರಿದಾಗ ಪರಸ್ಪರ ಕುಶಲಪ್ರಶ್ನೆಗಳಾದ ಮೇಲೆ ವಸಿಷ್ಠರು ಪರ್ವತದ ಗುಹೆಗಳಲ್ಲಿ ಪ್ರತಿಧ್ವನಿಯುಂಟಾಗುವಂತೆ ಮಾತಿಗಾರಂಭಿಸಿದರು.



**ವಸಿಷ್ಠರು**:—ಅಯ್ಯಾ, ರಾಜಾಧಿರಾಜನೆ, ನೀನು ಪ್ರಪಂಚವನ್ನೆಲ್ಲ ಒಟ್ಟುಗೂಡಿಸುವದಕ್ಕಾಗಿ ಪ್ರಬಲವಾದ ಪ್ರಯತ್ನಗಳನ್ನು ಮಾಡುತ್ತಿರುವೆಯೆಂದು ನಾನು ಬಹುಕಾಲದಿಂದ ಕೇಳಿದ್ದೇನೆ. ಯಾನಾಗಲೂ ತಪಶ್ಚರ್ಯೆ, ವೇದಾಧ್ಯಯನ, ಮತ್ತು ವೈದಿಕಧರ್ಮಾನುಷ್ಠಾನ—ಇವುಗಳಲ್ಲಿಯೇ ತೊಡಗಿರುವ ನನಗೆ ನಿನ್ನಂಥ ಮಹಾತ್ಮನ ಆಶ್ಚರ್ಯಕರವಾದ ಪ್ರಯತ್ನಗಳ ವೃತ್ತಾಂತಗಳನ್ನು ಪರಿಚಯ ಮಾಡಿಕೊಳ್ಳುವದಕ್ಕೆ ಅವಕಾಶವೇ ಇರಲಿಲ್ಲ. ಈ ದಿನ ನಿನ್ನ ಸಮಾಗಮವಾದದ್ದೊಂದು ಅಪೂರ್ವಭಾಗ್ಯವೆಂದು ಹೇಳಬೇಕು. ಆದ್ದರಿಂದ ದಯವಿಟ್ಟು ನಿನ್ನ ಕಾರ್ಯಭಾಗಗಳ ವೃತ್ತಾಂತವನ್ನು ನನಗೆ ಹೇಳಿ ನನ್ನ ಕುತೂಹಲವನ್ನು ಪೂರ್ಣಮಾಡುವೆಯಾ?

**ವಿಶ್ವಾಮಿತ್ರರು**:–(ಭಯಂಕರವಾದ ಬಲ್ಲಿನ ಹೆದೆಯ ಝೇಂಕಾರದಂತೆ ಗಂಭೀರವಾದರೂ ಸ್ವಲ್ಪ ಕರ್ಕಶವಾದ ಸ್ವರದಿಂದ) ಬ್ರಹ್ಮರ್ಷಿಗಳೆ, ತಮ್ಮಂಥ ಮಹನೀಯರು ನನ್ನಂಥ ಸಾಮಾನ್ಯನ ಕಾರ್ಯವಿಶೇಷಗಳನ್ನು ಕೇಳಬೇಕೆಂಬ ಆದರವನ್ನು ತೋರಿಸುವದು ನನ್ನ ಸುದೈವವೇ ಸರಿ. ತನ್ನ ಪ್ರತಾಪವನ್ನು ತಾನೇ ಹೇಳಿಕೊಳ್ಳುವದು ಪಾಪವಾದರೂ ತಮ್ಮ ಕುತೂಹಲವನ್ನು ಪೂರ್ಣಮಾಡುವದಕ್ಕಾಗಿ ಮಾತ್ರ ಹೇಳುತ್ತೇನೆ.

ಕಾರ್ಯಸಾಧನೆಗೆ ಉಪಾಯಗಳು ಸಾಮ, ದಾನ, ಭೇದ ಮತ್ತು ದಂಡ ಎಂದು ನಾಲ್ಕಷ್ಟೆ? ಇವುಗಳಲ್ಲಿ ಕೊನೆಯ ಎರಡು ಬಹು ಯೋಗ್ಯಗಳೆಂದು ನನ್ನಭಿಪ್ರಾಯ. ಈಗ ನಾನು ಅಂಗ, ವಂಗ, ಕಳಿಂಗ, ದ್ರವಿಡ, ಕಾಶಿ, ಕಂಚಿ, ಅವಂತಿಕಾ, ಮಹಾರಾಷ್ಟ್ರ, ಸೌರಾಷ್ಟ್ರ, ಘೂರ್ಜರರಾಷ್ಟ್ರ, ಮತ್ಸ್ಯ, ಮಗಧ, ವಿದರ್ಭ—ಮೊದಲಾದ ಅನೇಕರಾಜ್ಯಗಳನ್ನು ಒಂದೇ ಒಂದಕ್ಷೋಹಿಣಿಯ ಸಹಾಯದಿಂದ ನನ್ನಾಳಿಕೆಗೊಳಪಡಿಸಿಕೊಂಡು ಹಿಮಾಲಯದ ಬಳಿಯಲ್ಲಿ ಬೀಡು ಬಿಟ್ಟಿದ್ದೇನೆ. ಅತ್ಯಂತಚತುರರಾಗಿ ನನ್ನ ನಂಬಿಕೆಗೆ ಅರ್ಹರಾದ ಮಂತ್ರಿಗಳಾಗಿ ಅಂತಃಕಲಹಗಳನ್ನು ಹುಟ್ಟಿಸುವದರಲ್ಲಿ ದಕ್ಷರಾದ ಕೆಲ

ವರನ್ನು ಚೀನರು, ಹೂಣರು, ಷಾಣರು, ಸಿಯಾಮರು ಮತ್ತು ಇತರ ಪೂರ್ವದೇಶೀಯರು ಮೊದಲಾದವರಲ್ಲಿ ಕಲಕಲವನ್ನು ಹುಟ್ಟಿಸುವದಕ್ಕೆ ಕಳುಹಿಸಿದ್ದೇನೆ. ಇದಲ್ಲದೆ ನನ್ನ ಸರ್ವಸೇನಾಧೀಶ್ವರನನ್ನು ತೊಂಬ ತ್ತೊಂಬತ್ತು ಅಕ್ಷೋಹಿಣಿಯ ದಂಡಿನೊಡನೆ ಶಕರು, ಯವನರು— ಮೊದಲಾದವರ ಮೇಲೆ ದಾಗೇಮಾಡುವದಕ್ಕಾಗಿ ಪಶ್ಚಿಮದಿಕ್ಕಿಗೆ ಕಳುಹಿಸಿದ್ದೇನೆ. ಎಲ್ಲಕಡೆಯಿಂದಲೂ ನನಗೆ ಗೆಲುವಿನ ಸುದ್ದಿಯೇ ಬಂದಿರುತ್ತದೆ. ಈ ಹಿಮಾಲಯಪರ್ವತಪ್ರಾಂತಗಳನ್ನು ಗೆದ್ದ ಮೇಲೆ ನಾನು ಒಂದು ಸಲ ನನ್ನ ಸೇನೆಯೊಡನೆ ಈ ಭೂಮಂಡಲವನ್ನು ಸುತ್ತಿಬಿಟ್ಟರೆ ನನ್ನ ವಿಜಯಯಾತ್ರೆಯು ಮುಗಿಯುವದು.

**ವಸಿಷ್ಠರು:**—ನಿನ್ನ ವಿಜಯಗಳ ವೃತ್ತಾಂತವನ್ನು ಕೇಳಿ ನನಗೆ ಬಹು ಆನಂದವಾಯಿತು. ನೀನು ಒಳ್ಳೆಯ ರಾಜನೀತಿಕುಶಲನು ಮತ್ತು ಯೋಧಾಗ್ರೇಸರರಲ್ಲಿ ಶ್ರೇಷ್ಠನು. ನಿನ್ನಂಥವರಿಗೆ ಪ್ರಪಂಚ ವನ್ನು ಗೆಲ್ಲುವದೆಂಬುದೊಂದು ದೊಡ್ಡದಲ್ಲ. ಆದರೆ ನನಗೊಂದು ಸಂದೇಹವಿದೆ. ನೀನು ಅದನ್ನು ದಯವಿಟ್ಟು ಪರಿಹಾರಮಾಡಿದರೆ ನಾನು ನಿನಗೆ ತುಂಬ ಕೃತಜ್ಞನಾಗಿರುತ್ತೇನೆ.

**ವಿಶ್ವಾಮಿತ್ರರು:**—ತಾವೇನೂ ವಿನೋದಕ್ಕಾಗಿ ಕೇಳುವವ ರಲ್ಲ. ಆದ್ದರಿಂದ ತಮ್ಮ ಸಂದೇಹವೇನೆಂಬುದನ್ನು ದಯವಿಟ್ಟು ಹೇಳ ಬಹುದು; ಅದನ್ನು ಪರಿಹಾರಮಾಡುವದು ಸ್ವಲ್ಪವಾದರೂ ಸಾಧ್ಯ ವಾಗಿದ್ದರೆ ಅಗತ್ಯವಾಗಿ ಮಾಡುತ್ತೇನೆ.

**ವಸಿಷ್ಠರು:**—ಹಾಗಾದರೆ ಆಗಲಿ. ಹೀಗೆ ಕಾಲುಕೆರೆದು ಜಗಳ ವನ್ನು ತೆಗೆದು ಪಡೆಯುವ ಜಯಪ್ರದಗಳಿಂದ ಫಲವೇನು?

**ವಿಶ್ವಾಮಿತ್ರರು:**—ಮಹಾತ್ಮರೇ, ಅದು ನಿಷ್ಫಲವೆಂದು ಯೋ ಚಿಸಬೇಡಿರಿ. ಈಗ ಈ ಭೂಮಂಡಲದಲ್ಲಿ ಗೇಣಿಗೊಂದು ಮಾರಿಗೊಂದು ಬೇರೆಬೇರೆ ರಾಜ್ಯಗಳಿರುವವು. ಒಂದೊಂದರ ಆಳಿಕೆಯ ಕ್ರಮವೇ ಒಂದೊಂದು ಬಗೆ. ಸೌಕರ್ಯಗಳು ಮತ್ತು ಅಸೌಕರ್ಯಗಳು ಪ್ರತಿ ಯೊಂದು ದೇಶದಲ್ಲಿಯೂ ಭಿನ್ನಭಿನ್ನವಾಗಿರುವವು. ನನ್ನ ಜಯಪ್ರದವು

ಭೂಮಂಡಲವನ್ನೆಲ್ಲ ಒಂದೇ ಆಳಿಕೆಗೊಳಪಡಿಸಿ ಸಮತ್ವಕ್ಕೆ ತರುವದು ಮತ್ತು ಅದರ ಮೂಲಕ ಎಲ್ಲ ಜನಾಂಗದಲ್ಲಿಯೂ ಒಕ್ಕಟ್ಟನ್ನು ಸ್ಥಿರ ಪಡಿಸುವದು.

**ವಸಿಷ್ಠರು:**—ಈ ನಿನ್ನ ಅಭಿಪ್ರಾಯವನ್ನು ನಾನು ಒಪ್ಪುವದಿಲ್ಲ. ಏಕೆಂದರೆ ಜಯಕ್ಕೆ ಪರಾಜಯಭೀತಿಯೊಂದು ಕಡೆ; ಸೋತವರಿಗೆ ಅಸಮಾಧಾನ ಒಂದು ಕಡೆ. ಅಂತು ಈ ಜಯಪ್ರದಗಳು ಗೆದ್ದವರಿಗೂ ಸೋತವರಿಗೂ ಪರಸ್ಪರ ವೈಮನಸ್ಸನ್ನುಂಟುಮಾಡಿ ಒಕ್ಕಟ್ಟಿನ ಅವಕಾಶವನ್ನೇ ತಪ್ಪಿಸಿಬಿಡುವದೆಂದು ನನಗೆ ತೋರುತ್ತದೆ. ನಾನು ಕೇಳುವದೇನೆಂದರೆ–ಗೆದ್ದವರಿಗೂ ಸೋತವರಿಗೂ ನಿಜವಾದ ಒಕ್ಕಟ್ಟು ಬೆಳೆಯುವದುಂಟೆ?

**ವಿಶ್ವಾಮಿತ್ರರು:**— ಪ್ರಪಂಚದಲ್ಲಿ ಜಯಪ್ರದವನ್ನು ಬಿಟ್ಟರೆ ಮತ್ತೆ ಯಾವದೂ ಒಕ್ಕಟ್ಟನ್ನು ನೆಲೆಗೊಳಿಸುವದಿಲ್ಲ. ಇದನ್ನು ನಾನು ಚೆನ್ನಾಗಿ ಮನಗಂಡಿದ್ದೇನೆ. ಗೆದ್ದವನು ಪ್ರಜೆಗಳನ್ನು ತಂದೆಯ ಹಾಗೆ ಕಾಪಾಡುತ್ತಾನೆ. ಆಗ ಪ್ರಜೆಗಳೆಲ್ಲ ಒಡಹುಟ್ಟಿದವರಂತಾಗುತ್ತಾರೆ. ನಿಜವಾಗಿಯೂ ನಾನು ಜಯಪ್ರದಗಳ ಮೂಲಕ ಒಕ್ಕಟ್ಟನ್ನು ನೆಲೆಗೊಳಿಸಲೆಂದು ನನ್ನನ್ನು ಪ್ರೋತ್ಸಾಹಿಸುವದಕ್ಕಾಗಿಯೇ ನಿನ್ನೆಯ ರಾತ್ರಿ ಋಭುಗಳು ಬಂದಿದ್ದರೆಂದು ನಾನು ತಿಳಿಯುತ್ತೇನೆ.

**ವಸಿಷ್ಠರು:**—ನೀನು ಹಾಗೆ ತಿಳಿದಿರುವದು ತಪ್ಪು. ಋಭುಗಳು ಆಗಾಗ ತಮ್ಮ ಜನ್ಮಭೂಮಿಯನ್ನು ನೋಡಿಕೊಂಡು ಹೋಗುವದಕ್ಕೆ ಬರುವದುಂಟು. ಅವರು ನಿನ್ನನ್ನು ಪ್ರೋತ್ಸಾಹಿಸುವದಕ್ಕೆ ಬರಲಿಲ್ಲ. ಮತ್ತೊಂದು ಮಾತೇನೆಂದರೆ—ಜಯಪ್ರದಗಳಿಂದ ನೀನು ಮನುಷ್ಯರ ಸ್ಥೂಲಶರೀರಗಳನ್ನು ಅಧೀನಮಾಡಿಕೊಳ್ಳಬಹುದೇ ಹೊರತು ಅವರ ಮನಸ್ಸಿನ ಮೇಲೆ ನಿನ್ನ ಮಾತೇನು ನಡೆಯುವದು?

**ವಿಶ್ವಾಮಿತ್ರರು:**— ಅವರ ಮನಸ್ಸಿನಲ್ಲಿ ಹುಟ್ಟುವ ಯಾವದೊಂದು ಕಲಕಲವನ್ನೂ ನಾನು ಹೊರಕ್ಕೆ ಬರಗೊಡುವದೇ ಇಲ್ಲ.

**ವಸಿಷ್ಠರು:**— ಇದು ರಕ್ಷಣೆಯಲ್ಲ; ಇದಕ್ಕೆ ಒಕ್ಕಟ್ಟೆಂಬ ಹೆಸರು ಒಪ್ಪುವದಿಲ್ಲ. ಮನಸ್ಸಿನಲ್ಲಿ ಅಳುಕು ಸೇರಿಕೊಂಡರೆ ಒಡ ಹುಟ್ಟಿದವರೆಂಬ ಭಾವನೆ ಎಂದಿಗೂ ತಲೆಯೆತ್ತುವದಿಲ್ಲ.

**ವಿಶ್ವಾಮಿತ್ರರು:**—ಧನುರ್ಬಾಣಗಳ ಪ್ರಭಾವದಿಂದ ಅವರಿಗೆ ಅಧೀನತೆಯೇ ಒಗ್ಗುವಂತೆ ಮಾಡಿ ಆ ರೀತಿಯಲ್ಲಿ ಅವರನ್ನು ಸಮಾನ ಸ್ಥಿತಿಗೆ ತರುತ್ತಲೇ ಅವರೆಲ್ಲರೂ ಒಡಹುಟ್ಟಿದವರಂತೆ ಆಗಿಯೇ ಆಗುತ್ತಾರೆ.

**ವಸಿಷ್ಠರು:**—ಧನುರ್ಬಾಣಗಳ ಪ್ರಭಾವದಿಂದ ಆಗುವ ಸಮಾ ಧಾನದ ಒಕ್ಕಟ್ಟು ಏತಕ್ಕೆ ಬಂದೀತು? ಅದು ಬೂದಿ ಮುಚ್ಚಿದ ಕೆಂಡ. ಅದು ಯಾವಾಗಲಾದರೂ ಹೊತ್ತಿಕೊಂಡರೆ ಜಗತ್ತೇ ಉರಿದು ಹೋಗುವದು. ಆ ದಿಗ್ವಿಜಯಿಯೂ ಅದಕ್ಕೆ ಆಹುತಿಯಾಗುವನು.

**ವಿಶ್ವಾಮಿತ್ರರು:**— (ಬಲದೋಳನ್ನು ಮುಂದಕ್ಕೆ ಚಾಚಿ) ಹಾಗೆ ತಿಳಿಯಬೇಡಿರಿ. ಈ ಹಸ್ತವು ಧನುರ್ಬಾಣಗಳನ್ನು ಹಿಡಿದಿರುವ ವರೆಗೂ—ಈ ತೋಳಿನಲ್ಲಿ ಬಲವಿರುವವರೆಗೂ—ನನ್ನ ಪ್ರಜೆಗಳು ನನ್ನ ಮೇಲೆ ಕೈಮಾಡುವ ಯೋಚನೆಯನ್ನೆಂದಿಗೂ ನಡೆಸಲಾರರು.

**ವಸಿಷ್ಠರು:** —ತೋಳಬಲದಿಂದ ಜನರಲ್ಲೆಲ್ಲ ಪ್ರತಿಯೊಬ್ಬರೂ ಒಡಹುಟ್ಟಿದವರೆಂಬ ಭಾವನೆಯನ್ನು ಕಾಪಾಡುವದಾದರೆ ಅದು ಒಡ ಹುಟ್ಟಿದವರ ಲಕ್ಷಣವಾಗುವದೇ ಇಲ್ಲ.

**ವಿಶ್ವಾಮಿತ್ರರು:**—ಹಾಗಾದರೆ ತಾನೇ ಹೇಳಿ. ಒಡಹುಟ್ಟಿ ದವರೆಂಬ ಭಾವನೆಯನ್ನು ನೆಲೆಗೊಳಿಸುವದಕ್ಕೆ ದಿಗ್ವಿಜಯದ ಹೊರತು ಇನ್ನೇನಾದರೂ ಉಪಾಯವಿದೆಯೊ?

**ವಸಿಷ್ಠರು:**—ಇಲ್ಲದಿದ್ದರೆ ನಾನು ಇಷ್ಟೇಕೆ ಗಂಟಲೊಣಗಿಸಿ ಕೊಳ್ಳುತ್ತಿದ್ದೆನು? ಭೇದ ಮತ್ತು ದಂಡ ಇವುಗಳೇ ಮುಖ್ಯೋ ಪಾಯಗಳಾಗಿದ್ದರೆ ಸಾಮಕ್ಕೂ ಮತ್ತು ದಾನಕ್ಕೂ ಅಗ್ರಸ್ಥಾನ ವನ್ನು ಕೊಟ್ಟ ನಮ್ಮ ಪೂರ್ವಿಕಪುಣ್ಯಪುರುಷರನ್ನು ಪೂರ್ವಾಪರ ವಿಚಾರವಿಲ್ಲದವರೆನ್ನಬೇಕಾದೀತು!

**ವಿಶ್ವಾಮಿತ್ರರು**:—ಹಾಗಾದರೆ ಎಲ್ಲಿ? ನಿಮ್ಮ ಚೀಲವನ್ನು ಸ್ವಲ್ಪ ಬಿಚ್ಚಿರಿ.

**ವಸಿಷ್ಠರು**:—ಒಳ್ಳೇದು; ನಮ್ಮ ಚೀಲದಲ್ಲಿಯೂ ಏನೂ ಇಲ್ಲದೆ ಇಲ್ಲ. ಇರುವದು ಇದ್ದೇ ಇದೆ. ಇಲ್ಲಿ ನೋಡು. ಬಲಾತ್ಕಾರ ದಿಂದ ಒಕ್ಕಟ್ಟನ್ನು ಮಾಡುವದು ಸಾಧ್ಯವಿಲ್ಲ. ಈಚೀಚೆಗೆ ಪ್ರತಿ ಯೊಬ್ಬರೂ ಪ್ರತಿಯೊಂದನ್ನೂ ತಮಗೆ ತಾವೇ ಸ್ವತಂತ್ರವಾಗಿ ಯೋಚಿ ಸುವ ಪದ್ಧತಿ ಬರುತ್ತಿದೆ. ಈ ಪದ್ಧತಿ ನಿರ್ಮೂಲವಾಗುವವರೆಗೂ ಕೊನೆಗೆ ಯಾವ ಇಬ್ಬರಲ್ಲಿಯೂ ಒಕ್ಕಟ್ಟನ್ನು ಬೆಳೆಸುವದಕ್ಕಾಗುವದಿಲ್ಲ. ಒಕ್ಕಟ್ಟನ್ನು ಹರಡುವದಕ್ಕೆ ಅತಿಮುಖ್ಯವಾದ ಮೊದಲನೆಯ ಉಪಾ ಯವೇನೆಂದರೆ—ಸರ್ವಸಾಮಾನ್ಯವಾಗಿ ಎಲ್ಲವನ್ನೂ ಎಲ್ಲರೂ ಸ್ವತಂತ್ರ ವಾಗಿ ಯೋಚಿಸುತ್ತ ಹೋಗದಂತೆ ತಡೆಯಬೇಕು. ಕೀಳುಜಾತಿಯ ವರಿಗೆ ಸ್ವತಂತ್ರವಿಚಾರದ ಅಧಿಕಾರವೇ ಇಲ್ಲದಂತೆ ಸರ್ವಪ್ರಯತ್ನ ವನ್ನೂ ಮಾಡಬೇಕು. ಏಕೆಂದರೆ ಪರಿಪಕ್ವಬುದ್ಧಿಗಳಲ್ಲದವರು ಸ್ವತಂತ್ರ ವಿಚಾರಕ್ಕೆ ಹೋದರೆ ಅವರಿಗೆ ವಿಪರೀತಭಾವನೆಯೇ ಉಂಟಾಗುವದು.

**ವಿಶ್ವಾಮಿತ್ರರು**:—ಹಾಗಾದರೇನು ಐದಾರುಜನ ಬ್ರಾಹ್ಮ ಣರು ಕುಳಿತು ಈ ಭೂಮಂಡಲದ ಸಮಸ್ತಜನರ ಸ್ವತಂತ್ರವಿಚಾರ ವನ್ನೂ ತಡೆಯಬಲ್ಲರೆಂದು ನೀವು ತಿಳಿದಿದ್ದೀರೋ?

**ವಸಿಷ್ಠರು**:— ವಿಶ್ವಾಮಿತ್ರನೇ, ಬುದ್ಧಿಶಕ್ತಿಗೆ ಅಸಾಧ್ಯವಾ ದದ್ದು ಯಾವದಿದೆ? ಬ್ರಾಹ್ಮಣೇತರರಲ್ಲಿ ಬಾಲ್ಯಾವಸ್ಥೆ ಮೊದಲು ಗೊಂಡು ಅವರ ಅಭಿಪ್ರಾಯಗಳನ್ನೆಲ್ಲ ನಮಗೆ ಅಧೀನವಾಗಿರುವಂತೆ ಬದಲಾಯಿಸಿಬಿಡುತ್ತೇನೆ. ಅವರ ಆಲೋಚನೆಯ ಶಕ್ತಿಯನ್ನೇ ಬೆಳೆಯ ಗೊಡುವದಿಲ್ಲ. ಅವರು ಅಧೀನಸ್ಥಿತಿಯಲ್ಲಿಯೇ ಆನಂದದಿಂದ ತೃಪ್ತಿಗಿ ರುವಂತೆ ಮಾಡುತ್ತೇನೆ. ಹೀಗೆ ಮಾಡಿ ಒಂದು ಶತಮಾನದಲ್ಲಾಗ ದಿದ್ದರೆ ಹತ್ತುಶತಮಾನದೊಳಗಾದರೂ ಮನುಷ್ಯರಲ್ಲಿ ಮಾತ್ರವೇ ಅಲ್ಲದೆ ಮೃಗಗಳಲ್ಲಿಯೂ ಕೂಡ ಒಕ್ಕಟ್ಟನ್ನು ನೆಲೆಗೊಳಿಸುವೆನು.

**ವಿಶ್ವಾಮಿತ್ರರು**:— ಇದು ಯಾವ ವಿಲಕ್ಷಣವಾದ ಉಪಾ ಯವೊ ನಾನು ಕಾಣೆ. ಇದೇನು ಬ್ರಾಹ್ಮಣರ ಅಧಿಕಾರಗಳನ್ನು

ನೆಲೆಗೊಳಿಸುವದಕ್ಕೊ? ಜಯಪ್ರದವು ಪ್ರಜೆಗಳನ್ನು ಒಬ್ಬ ರಾಜನಿಗೆ ಮಾತ್ರ ಅಧೀನರನ್ನಾಗಿ ಮಾಡುತ್ತದೆ. ಆದರೆ ನಿಮ್ಮ ಉಪಾಯವು ಜನರನ್ನು ಲಕ್ಷಾಂತರಬ್ರಾಹ್ಮಣರಿಗೆ ಅಧೀನರನ್ನಾಗಿ ಮಾಡುತ್ತದೆಯಲ್ಲ! ಇದರಿಂದ ಒಕ್ಕಟ್ಟು ನೆಲೆಗೊಳ್ಳುವದೆಂದು ನೀವು ನಿಜವಾಗಿ ನಂಬುತ್ತೀರಾ? ಅಥವಾ ಒಬ್ಬನ ಸ್ವತಂತ್ರವಿಚಾರವನ್ನು ತಡೆಯುವದು ತಾನೇ ಹೇಗೆ? ಯಾವನಾದರೂ ಒಬ್ಬನು ಸಹಜವಾಗಿ ಆಕಾಶದ ಗಾಢವಾದ ನೀಲವರ್ಣದ ಕಡೆಗೆ ಒಂದು ಸಲ ಕಣ್ಣು ಹಾಕಿದರೆ ಸಾಕು; ಅವನ ಸ್ವತಂತ್ರವಿಚಾರವನ್ನು ತಡೆಯುವದಕ್ಕೆ ಯಾರಿಂದಾದೀತು?

**ವಸಿಷ್ಠರು:—** ಅದನ್ನೂ ನಾನು ಯೋಚನೆ ಮಾಡಿದ್ದೇನೆ. ಬ್ರಾಹ್ಮಣರನ್ನು ಬಿಟ್ಟು ಒಂದು ಹೆಜ್ಜೆ ಇಡುವದಕ್ಕೂ ಯಾರಿಗೂ ಆಗದಂತೆ ತಕ್ಕ ಉಪಾಯಗಳನ್ನು ಮಾಡುವೆನು.

**ವಿಶ್ವಾಮಿತ್ರರು:—** ಸರಿ, ಸರಿ; ನೀವು ಯುಕ್ತಿಯಿಂದಲೇ ಪ್ರಪಂಚವನ್ನು ವಶಮಾಡಿಕೊಳ್ಳಬೇಕೆಂದು ಯೋಚಿಸುತ್ತೀರಿ. ಆದರೆ ಈ ಯುಕ್ತಿಯೇ ಎಷ್ಟು ಕಾಲ ಮನುಷ್ಯರನ್ನು ಬಲೆಗೆ ಬೀಳಿಸುವದು? ನಾನು ಖಂಡಿತವಾಗಿ ಹೇಳುತ್ತೇನೆ. ಎಂದೆಂದಿಗೂ ವಿಶ್ವಾಮಿತ್ರನ ಕಡೆಯವರ ಮೇಲೆ ನಿಮ್ಮ ಯುಕ್ತಿಯು ಹಾಯಲಾರದು.

ಈ ವಿಶ್ವಾಮಿತ್ರರ ಬಿರುನುಡಿಯ ಉತ್ತರವು ವಸಿಷ್ಠರನ್ನು ರೇಗಿಸುವ ಹಾಗಿತ್ತು. ವಸಿಷ್ಠರು ಬಹುಪ್ರಯತ್ನದಿಂದ ಅದನ್ನು ತಡೆದುಕೊಂಡು ಅದು ಚೆನ್ನಾಗಿ ಶಾಂತವಾಗುವವರೆಗೂ ಉಸಿರೆತ್ತದೆ ಇದ್ದರು. ಆಗ ವಿಶ್ವಾಮಿತ್ರರು ಸಮಯೋಚಿತವಾಗಿ ಮರ್ಮಭೇದಕವಾದ ಮಾತುಗಳನ್ನಾಡಿ ವಸಿಷ್ಠರನ್ನು ಮೂಲೆಗೆ ಕೂಡಿಸಿದೆನೆಂದು ತಿಳಿದುಕೊಂಡರು.

ಆಮೇಲೆ ಅವರಿಬ್ಬರೂ ಮಾತಾಡದೆ ಕೆಲವು ದೂರ ಇಳಿದು ಬಂದರು. ವಿಶ್ವಾಮಿತ್ರರಿಗೆ ತಮ್ಮ ದೂರದ ಬಿಡಾರವು ಕಾಣಿಸಿತು. ಆಗ ಅವರು ಆಕಾಶದ ಕಡೆಗೆ ತಲೆಯನ್ನೆತ್ತಿ ನೋಡಿ ವಸಿಷ್ಠರನ್ನು ಕುರಿತು "ಮಹರ್ಷಿಯರೇ, ಹಗಲು ಏರುತ್ತ ಬಂದಿದೆ; ತಮ್ಮ

ಬಿಡಾರವಿನ್ನೂ ದೂರದಲ್ಲಿದೆ; ಯಾವ ಸಂಕೋಚವೂ ಇಲ್ಲದಿದ್ದರೆ ಈ ದಿನ ತಾವು ಈ ಸೇವಕನ ಬಿಡಾರದಲ್ಲಿ ಆತಿಥ್ಯವನ್ನು ಸ್ವೀಕರಿಸಿದರೆ ನಾನು ಕೃತಾರ್ಥನಾಗುವೆನು''ಎಂದು ವಿನಯದಿಂದ ಕೇಳಿಕೊಂಡರು.

ವಸಿಷ್ಠರು ಅದಕ್ಕೆ ಒಪ್ಪಿದರು. ವಿಶ್ವಾಮಿತ್ರರು ಅವರನ್ನು ಬಹು ಉಪಚಾರದಿಂದ ತಮ್ಮ ಬಿಡಾರಕ್ಕೆ ಕರೆದುಕೊಂಡು ಹೋಗಿ ಹೆಚ್ಚು ಆದರವನ್ನು ತೋರಿಸಿದರು. ಆಮೇಲೆ ತಾವು ದೇಶದೇಶಗಳನ್ನೆಲ್ಲ ಕೊಳ್ಳೇಹೊಡೆದು ಕೂಡಿಹಾಕಿದ ಒಡವೆಗಳೂ ಅಪಾರವಾದ ಭಂಡಾರವೂ ಇರುವ ದಂಭದ ನೋಟವನ್ನೆಲ್ಲ ತೋರಿಸಿ ಅವುಗಳಲ್ಲಿ ಕೆಲವನ್ನು ವಸಿಷ್ಠರಿಗೆ ಬಹುಮಾನವಾಗಿ ಕೊಟ್ಟರು. ವಿಶ್ವಾಮಿತ್ರರ ಬಿಡಾರದಿಂದ ಹೊರಡುವಾಗ ವಸಿಷ್ಠರು ತಮ್ಮ ಬಡತನದ ಮುಯ್ಯನ್ನು ಸ್ವೀಕರಿಸುವದಕ್ಕೆ ನಾಳೆ ನಮ್ಮ ಆಶ್ರಮಕ್ಕೆ ಬರಬೇಕೆಂದು ವಿಶ್ವಾಮಿತ್ರರಿಗೆ ಅಕ್ಷತೆಯನ್ನು ಕೊಟ್ಟರು.



## ವಸಿಷ್ಠರ ಆಶ್ರಮ

ಹೇಳಿದ್ದ ಹೊತ್ತಿಗೆ ಸರಿಯಾಗಿ ವಿಶ್ವಾಮಿತ್ರರು ವಸಿಷ್ಠರ ಆಶ್ರಮಪ್ರದೇಶಕ್ಕೆ ಬಂದರು. ಅವರನ್ನು ಇದಿರುಗೊಳ್ಳುವದಕ್ಕಾಗಿ ವಸಿಷ್ಠರು ಬಹುದೂರ ಮುಂದೆ ಬಂದರು. ವಿಶ್ವಾಮಿತ್ರರು ವಸಿಷ್ಠರ ಆಶ್ರಮಪ್ರದೇಶವನ್ನು ನೋಡಿ ಬೆರಗಾದರು. ಸಾಲ, ತಾಲ, ತಮಾಲ, ಹಿಂತಾಲ–ಮುಂತಾದ ದೊಡ್ಡದೊಡ್ಡ ಕಾಡುಮರಗಳು ಆ ಆಶ್ರಮದ ಸುತ್ತಮುತ್ತಲೂ ನೆರಳುಕಟ್ಟಿಕೊಂಡು ನಿಂತಿದ್ದವು. ಅವುಗಳ ಕೆಳಗೆ ಒಂದು ಚೂರು ಕಸವು ಬಿದ್ದರೂ ಬಹುಬೇಗ ತೆಗೆಯಬೇಕೆನಿಸುವಷ್ಟು ಸುತ್ತಲೂ ಎಲ್ಲೆಲ್ಲಿಯೂ ಚೊಕ್ಕಟವಾಗಿತ್ತು. ಅಲ್ಲಲ್ಲಿ ಗೆಡ್ಡೆಗೆಣಸುಗಳನ್ನು ಅಗೆದ ಗುಂಡಿಗಳು ಮಾತ್ರ ಕಾಣುತ್ತಿದ್ದವು. ಹೋಮಧೂಮದ ವಾಸನೆಯಿಂದ ಕೂಡಿದ ಗಾಳಿಯು ಮಂದಮಂದವಾಗಿ ಬೀಸುತ್ತಿತ್ತು. ದೂರದಲ್ಲಿ ಉದಾತ್ತಾನುದಾತ್ತಸ್ವರಿತಗಳ ಸ್ಪಷ್ಟೋ

ಚ್ಚಾರಣೆಯಿಂದ ಕಿವಿಗಳಿಗಿಂಪಾಗಿ ವೇದಘೋಷವು ಕೇಳಬರುತ್ತಿತ್ತು. ಫಲಪುಷ್ಪಸಮಿತ್ತುಗಳನ್ನು ಹುಡುಕಿಕೊಂಡು ತಿರುಗುವ ಬ್ರಹ್ಮಚಾರಿಗಳು ಮಾತ್ರ ಅಲ್ಲಲ್ಲಿ ಒಬ್ಬಿಬ್ಬರು ಕಾಣುತ್ತಿದ್ದರು. ಯಾವ ಮರವನ್ನು ನೋಡಿದರೂ ಸೊಂಪಾಗಿ ಬೆಳೆದು ಫಲಪುಷ್ಪಭರಿತವಾಗಿತ್ತು. ತೀಕ್ಷ್ಣವಾದ ಸೂರ್ಯನ ಕಿರಣಗಳು ಎಲ್ಲ ಕಡೆಯಲ್ಲಿಯೂ ಪ್ರಸರಿಸಿಕೊಂಡಿದ್ದರೂ ಅದು ಚಂದ್ರಾತಪದಂತೆ ಹೃದಯಂಗಮವಾಗಿ ತೋರುತ್ತಿತ್ತು. ಯಾವದೊಂದು ಅಪ್ರಾಪ್ತವಸ್ತುವಿನ ಪ್ರಾಪ್ತಿ ಇಲ್ಲದಿದ್ದರೂ ಆ ಆಶ್ರಮದ ಗಡಿಗೆ ಬರುತ್ತಲೇ ವಿಶ್ವಾಮಿತ್ರರಿಗೆ ಅಸದೃಶವಾದ ಆನಂದಸ್ಫೂರ್ತಿಯಾಗುವದಕ್ಕೆ ಮೊದಲಾಯಿತು. ಅಲ್ಲಿನ ಮರಗಿಡಗಳೂ ಹಳ್ಳಕೊಳ್ಳಗಳೂ ಬೆಟ್ಟಗುಡ್ಡಗಳೂ ಮೃಗಪಕ್ಷಿಗಳೂ ಸಮಸ್ತ ಚರಾಚರಗಳೂ ಆನಂದಮಯವಾಗಿದ್ದ ಹಾಗೆ ಕಾಣುತ್ತಿತ್ತು. ಅಲ್ಲಿ ಎಲ್ಲೆಲ್ಲಿಯೂ ದುಃಖದ ವಾಸನೆಯು ಕೂಡ ಇರಲಿಲ್ಲ. ಹಸುರಾದ ಹುಲ್ಲುಗಾವಲಿನಲ್ಲಿ ಹಸುಗಳೂ ಹುಲಿಗಳೂ ಆನೆಗಳೂ ಸಿಂಹಗಳೂ ಸರ್ಪಗಳೂ ನವಿಲುಗಳೂ ತೋಳಗಳೂ ಕುರಿಗಳೂ ಪರಸ್ಪರಮೈತ್ರಿಯಿಂದ ಚಿನ್ನಾಟವಾಡುತ್ತ ಕನಸಿನಲ್ಲಿಯೂ ದುರ್ಭಾವವನ್ನು ಹೊಂದದೆ ಯಾವಾಗಲೂ ಸಾತ್ತ್ವಿಕಾಹಾರದಲ್ಲಿ ತತ್ಪರಗಳಾಗಿದ್ದವು. ಆ ವಿಸ್ತಾರವಾದ ಅರಣ್ಯದಲ್ಲಿ ಭಯಂಕರವಾದ ತೋಳಗಳು, ಕರಡಿಗಳು ಕೂಡ ವಸಿಷ್ಠವಿಶ್ವಾಮಿತ್ರರು ಅಲ್ಲಿಗೆ ಬಂದಾಗ ದಾರಿಯ ಎರಡು ಪಕ್ಕಗಳಲ್ಲಿಯೂ ಸಾಲುಗಟ್ಟಿಕೊಂಡು ನಿಂತು ಶರಣುಮಾಡುವಂತೆ ತಲೆಗಳನ್ನು ತಗ್ಗಿಸಿದವು.

**ವಿಶ್ವಾಮಿತ್ರರು:**—ಆಹಾ! ನೀವು ಒಳ್ಳೆಯ ಉದಾರಹೃದಯರು; ನಿಜ. ನಿಮ್ಮ ಬುದ್ಧಿಶಕ್ತಿಯು ಕಾಡುಮೃಗಗಳನ್ನು ಕೂಡ ಅಂಕೆಯಲ್ಲಿಟ್ಟುಕೊಂಡಿದೆ.

**ವಸಿಷ್ಠರು:**—ಅವುಗಳನ್ನು ಸಾಧುಮಾಡಿರುವದು ನನ್ನಬುದ್ಧಿಶಕ್ತಿಯಲ್ಲ; ಇಲ್ಲಿಯ ಸ್ಥಲಮಹಿಮೆ.

ಅಷ್ಟರಲ್ಲಿಯೇ ಜಾಗ್ರತೆಯಾಗಿ ಆ ಪ್ರದೇಶವನ್ನು ದಾಟಿದುದಾಯಿತು. ಅರಣ್ಯದ ನೋಟವು ತಪ್ಪಿ ಒಂದು ತೋಟವು ಸಿಕ್ಕಿತು.

ಶರತ್ಕಾಲದ ಬಗೆಬಗೆಯ ಹೂಗಳು ಉದುರಿ ದಟ್ಟವಾಗಿ ಹರಡಿಕೊಂಡಿರುವ ಆ ಆಶ್ರಮದ ವಿಸ್ತಾರವಾದ ಭೂಭಾಗವು ಅಂದವಾಗಿ ಹಾಸಿದ ಜಮಖಾನೆಯಂತೆ ಕಾಣುತ್ತಿತ್ತು. ಕೆಲವು ಕಡೆ ಬಗೆಬಗೆಯಾದ ಬಿಳುವು; ಕೆಲವು ಕಡೆ ನೀಲಿ; ಒಂದು ಕಡೆ ಕೆಂಪು; ಇನ್ನೊಂದು ಕಡೆ ಹಸುರು; ಮತ್ತೊಂದು ಕಡೆ ಹಳದಿ. ಇವುಗಳಲ್ಲಿಯೂ ಒಂದು ಬಾಡುತ್ತಿರುವದು; ಇನ್ನೊಂದು ಹೊಳೆಯುತ್ತಿರುವದು. ಹೀಗೆ ಎಲ್ಲವೂ ಒಟ್ಟುಗೂಡಿ ಚಿತ್ರವಿಚಿತ್ರವಾದ ಆಕೃತಿಯನ್ನು ತೋರಿಸುತ್ತಿದ್ದವು. ತಕ್ಕಮಟ್ಟಿಗೆ ಹೆಚ್ಚು ಬಗೆಬಗೆಯಾಗುವದಕ್ಕೆ ಹೂಗಳ ಬಣ್ಣವು ಸಾಲದ ಕಡೆ ಬಣ್ಣಬಣ್ಣದ ಕಲ್ಲುಗಳು ಸೇರಿರುತ್ತಿದ್ದವು. ಈ ಜಮಖಾನವು ವಾಯುಮಂಡಲವನ್ನೆಲ್ಲ ಸುಗಂಧಮಯವಾಗಿ ಮಾಡುವ ನಾನಾ ಪುಷ್ಪಗಳಿಂದ ಕೂಡಿ ಎಲ್ಲ ಕಡೆಯಲ್ಲಿಯೂ ಹರಡಿಕೊಂಡಿತ್ತು. ಈ ವಿಶಾಲವಾದ ಪ್ರದೇಶದ ಮಧ್ಯದಲ್ಲಿ ಒಂದು ದೊಡ್ಡಕೊಳ. ಅದಕ್ಕೆ ಇಳಿಯುವ ಸೋಪಾನದ ಮತ್ತು ಸಾಮಾನ್ಯವಾಗಿ ಬಹುಭಾಗದ ಕಟ್ಟಡವೆಲ್ಲ ಸಂಗಮರವರೀ ಕಲ್ಲಿನದು. ತೀರ ಕೆಳಗಣ ಕಲ್ಲು ಕೂಡ ಕಾಣುವ ಹಾಗೆ ನೀರು ಅಷ್ಟು ತಿಳಿಯಾಗಿತ್ತು. ಅದರ ಮೇಲೆ ಬಿಳಿಯ ಸಂಗಮರವರೀಕಲ್ಲಿನಿಂದಲೇ ಕಟ್ಟಿದ ಒಂದು ಸೇತುವೆ. ಅದರ ಎರಡು ಪಕ್ಕದಲ್ಲಿಯೂ ಪಚ್ಚೆಯ ಕಟ್ಟೆ. ಕಟ್ಟೆಯ ಮೇಲೆ ರತ್ನಖಚಿತವಾದ ಕಂಬಗಳು. ಅವುಗಳ ಮೇಲೆ ಶುಕ, ಶಾರಿಕೆ—ಮೊದಲಾದ ಮಧುರಸ್ವರದ ಪಕ್ಷಿಗಳು ಕುಳಿತುಕೊಂಡು ಕಲಕಲಧ್ವನಿಯನ್ನು ಮಾಡುತ್ತಿದ್ದವು. ಬಗೆಬಗೆಯಾದ ಬಣ್ಣಗಳ ಬಾಲಗಳೂ ರೆಕ್ಕೆಗಳೂ ಉಳ್ಳ ಹೆಣ್ಣುನವಿಲುಗಳೂ ಗಂಡುನವಿಲುಗಳೂ ಕುಣಿಯುತ್ತ ಆ ಮಹಾರಾಜನಿಗೆ ಶುಭಾಗಮನವನ್ನು ಬಯಸಿದವು. ಕೆಂಪು, ನೀಲಿ, ಹಳದಿ, ಮತ್ತು ಅರಿಸಿನ—ಮೊದಲಾದ ಬಣ್ಣಗಳ ಮೀನುಗಳು ಆ ಪಾರದರ್ಶಕವಾದ ನೀರಿನಲ್ಲಿ ಈಸುತ್ತಿದ್ದವು. ಆ ಕೊಳದ ಆಚೆ ಸ್ವಲ್ಪ ದೂರದಲ್ಲಿಯೇ ಮತ್ತೊಂದು ಹೂವಿನ ಜಮಖಾನವಿತ್ತು. ಇದರ ಸಮೀಪದಲ್ಲಿಯೇ ಒಂದು ದೊಡ್ಡ ಅರಮನೆ. ಅದರ ಸ್ಪರ್ಶಶಿಲೆಯ ಬಾಗಲುವಾಡದ ಮೇಲೆ "**ಗಾಧಿವಂಶಕ್ಕೆ ತಿಲಕಪ್ರಾಯರಾದ ವಿಶ್ವಾಮಿತ್ರರಿಗೆ ಶುಭಾಗಮನವಾಗಲಿ**" ಎಂದು ಚಿನ್ನದಕ್ಷರಗಳಿಂದ ಬರೆದಿತ್ತು.

ಆ ಅರಮನೆಯ ಒಳಕ್ಕೆ ಹೋಗುತ್ತಲೇ ವಿಶ್ವಾಮಿತ್ರರು ತಾವು ಜಯಿಸಿದ ಯಾವಯಾವ ದೇಶದಲ್ಲಿಯೂ ಕಾಣದೆ ಇದ್ದಂಥ ಅಟ್ಟಹಾಸದ ವಸ್ತುಗಳನ್ನು ಕಂಡರು. ಮುತ್ತುಗಳು, ಹವಳಗಳು ಮತ್ತು ಇತರ ಅಮೂಲ್ಯವಾದ ರತ್ನಗಳು—ಇವುಗಳಿಂದ ಅಲಂಕೃತವಾಗಿದ್ದ ಆ ದಿವ್ಯಭವನವು ಸಂಪೂರ್ಣವಾಗಿ ಅಮೂಲ್ಯವಾದ ಮತ್ತು ಅತ್ಯುತ್ತಮವಾದ ಕಲ್ಲುಗಳಿಂದ ಕಟ್ಟಲ್ಪಟ್ಟಿತ್ತು. ಗೋಡೆಗಳ ಮೇಲೆ ಪರಶುರಾಮನ ವಿಜಯವು ಚಿತ್ರಿತವಾಗಿತ್ತು. ಒಂದು ಕಡೆ ಪರಶುರಾಮನು ಕ್ಷತ್ರಿಯಕುಲವನ್ನು ನಿರ್ಮೂಲಮಾಡಿ ನಿರ್ಮಿಸಿದ ಕ್ಷಾತ್ರರಕ್ತದ ಸರೋವರದಿಂದ ತನ್ನ ಪಿತೃದೇವತೆಗಳಿಗೆ ತರ್ಪಣವನ್ನು ಕೊಡುತ್ತ ಅವರನ್ನು ಸಂತಯಿಸುತ್ತಿದ್ದನು. ಅವನ ಇಪ್ಪತ್ತೊಂದು ಸಲದ ಭೂಪ್ರದಕ್ಷಿಣೆಯ ಇತಿಹಾಸವು ಇಪ್ಪತ್ತೊಂದು ಪ್ರಾಕಾರಗಳಲ್ಲಿಯೂ ಲಿಖಿತವಾಗಿತ್ತು.

ವಿಶ್ವಾಮಿತ್ರರು ಬೆರಗಾಗಿ ಇವೆಲ್ಲವನ್ನೂ ನೋಡಿದರು. ನಾನು ಮಾಡಿದ ಆತಿಥ್ಯಕ್ಕೆ ಮುಯ್ಯಿಮಾಡುವದೇ ಅಲ್ಲದೆ ನಾನಾಡಿದ ಮಾತುಗಳಿಗೂ ಕೂಡ ಉತ್ತರದ ರೂಪವಾಗಿ ವಸಿಷ್ಠರು ಹೀಗೆ ಮಾಡಿದ್ದಾರೆಂದು ವಿಶ್ವಾಮಿತ್ರರು ತಿಳಿದರು. ಅವರ ಮನಸ್ಸಿನಲ್ಲಿ ಸ್ವಲ್ಪಸ್ವಲ್ಪವಾಗಿ ದುರಭಿಪ್ರಾಯಗಳು ಹುಟ್ಟಿ ಕೊನೆಗೆ ಅದು ಬಲವಾದ ಅಸೂಯೆಯಾಗಿಯೇ ಪರಿಣಮಿಸಿತು. ಆದರೆ ಅವರು ಅದನ್ನು ಕೆಲವು ಕಾಲ ತಮ್ಮ ಹೊಟ್ಟೆಯಲ್ಲಿಯೇ ಅಡಗಿಸಿಕೊಂಡು ವಸಿಷ್ಠರ ಆತಿಥ್ಯದ ಕಡೆಗೆ ಮನಸ್ಸಿಟ್ಟು ಆನಂದದಿಂದ ಉಂಡು, ತಿಂದು, ಕುಡಿದು, ನರ್ತನದ ಮತ್ತು ಗಾನದ ಸುಖವನ್ನು ಅನುಭವಿಸಿದರು. ಅವರು ಹೊರಡುವ ಕಾಲಕ್ಕೆ ವಸಿಷ್ಠರು ಕೆಲವು ರಾಜಯೋಗ್ಯವಾದ ಬಹುಮಾನಗಳನ್ನು ತಂದರು.

**ವಿಶ್ವಾಮಿತ್ರರು:**—ಮಹನೀಯರೆ! ನೀವು ವಿರಕ್ತರು ಮತ್ತು ನೀವಿರುವದೊಂದರಣ್ಯ; ಈ ಅಸಂಖ್ಯಾಕದ್ರವ್ಯವಿಶೇಷಗಳು ನಿಮಗೆ ಎಲ್ಲಿಂದ ಬರುತ್ತವೆ?

**ವಸಿಷ್ಠರು:**— ಮಹಾರಾಜನೆ, ನನ್ನಲ್ಲೊಂದು ಹಸುವಿದೆ.

ಅದರ ಹೆಸರು ನಂದಿನಿ. ಅದು ಕಾಮಧೇನುವಿನ ಸಂತತಿ. ನಾನು ಅಪೇಕ್ಷಿಸಿದುದನ್ನೆಲ್ಲ ಅದು ಒದಗಿಸುತ್ತದೆ.

**ವಿಶ್ವಾಮಿತ್ರರು:**—ಹಾಗಾದರೆ ನನಗೆ ಈ ಕ್ಷುದ್ರಖಾದ್ಯಪದಾರ್ಥಗಳಿಂದ ತೃಪ್ತಿಯಾಗುವದಿಲ್ಲ. ಆ ಹಸುವನ್ನು ನನಗೆ ಕೊಟ್ಟುಬಿಡಬೇಕು.

**ವಸಿಷ್ಠರು:**—ನಾನು ಅದರ ತಾಯಿಯ ಬಳಿಯಿಂದ ಅದನ್ನು ಕರೆದುಕೊಂಡು ಬರುವಾಗ ಅದನ್ನು ಎಂದಿಗೂ ಇನ್ನೊಬ್ಬರ ಪಾಲು ಮಾಡುವದಿಲ್ಲವೆಂದು ಮಾತುಕೊಟ್ಟಿದ್ದೇನೆ.

**ವಿಶ್ವಾಮಿತ್ರರು:**— ಭಾರತೀಯಸಮಾಜದ ನಿಯಾಮಕರಾದ ನೀವು ಯೋಚಿಸಿನೋಡಿರಿ. ನನಗೆ ಇಲ್ಲವೆಂದು ಹೇಳಿದರೆ ನೀವು ಅತಿಥಿಗೆ ಅನಾದರಣೆಯನ್ನು ತೋರಿಸಿದಂತಾಗುವದು.

**ವಸಿಷ್ಠರು:**—ಬಲಾತ್ಕಾರದಿಂದ ಅಥವಾ ಯುಕ್ತಿಯಿಂದ ಒಬ್ಬನನ್ನು ಮಾತಿಗೆ ಸಿಕ್ಕಿಸಿಕೊಳ್ಳುವದು ದೊಡ್ಡ ತಪ್ಪು. ಅಂಥ ದುರ್ಭಾವನೆಗಳನ್ನು ದೂರಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಇನ್ನು ವಿಶ್ವಾಮಿತ್ರರು ತಮ್ಮ ಉದ್ದೇಶವನ್ನು ಬಹುಕಾಲ ಅಡಗಿಸಿಕೊಳ್ಳಲಾಗಲಿಲ್ಲ. ಆಗ ವಸಿಷ್ಠರ ಕಡೆಗೆ ತಿರುಗಿ—"ನೀವು ಅದನ್ನು ನನಗೆ ಕೊಡುವದಿಲ್ಲವೊ? ಒಳ್ಳೇದು. ನಾನು ಅದನ್ನು ನಿಮ್ಮಿಂದ ಕಸುಕೊಂಡು ಹೋಗುತ್ತೇನೆ. ಒಬ್ಬನನ್ನು ಮಾತಿಗೆ ಸಿಕ್ಕಿಸಿಕೊಳ್ಳುವದಕ್ಕಿಂತಲೂ ಸುಲಿಗೆಮಾಡುವದು ಅಷ್ಟು ದೊಡ್ಡ ತಪ್ಪಲ್ಲವೆಂದು ನನಗೆ ತೋರುತ್ತದೆ"—ಎಂದು ಹೇಳಿ ವಿಶ್ವಾಮಿತ್ರರು ಹಸುವನ್ನು ಹಿಡಿದುಕೊಳ್ಳಿರೆಂದು ತಮ್ಮ ಕಡೆಯವರಿಗೆ ಅಪ್ಪಣೆಯನ್ನು ಕೊಟ್ಟರು.

ಒಂದು ರೀತಿಯಲ್ಲಿ ನೋಡಿದರೆ ಅತಿಥಿಯು ಸಾಕ್ಷಾದ್ಭಗವಂತನು; ಇನ್ನೊಂದು ರೀತಿಯಲ್ಲಿ ನೋಡಿದರೆ ಬಲಾತ್ಕಾರದಿಂದ ಸುಲಿಗೆಯನ್ನು ಮಾಡುವವನು. ಆದ್ದರಿಂದ ವಸಿಷ್ಠರಿಗೆ ದಿಕ್ಕು ತೋಚದಂತಾಯಿತು. ಅವರು ಏನನ್ನೂ ಹೇಳಲಿಲ್ಲ. ಸೈನಿಕರು ಹಸುವನ್ನು ಹಿಡಿಯುವ ಯತ್ನವನ್ನು ಮಾಡಿದರು. ಆ ಹಸುವು ವಸಿಷ್ಠರ ಮನಸ್ಸು ಕರಗುವಂತೆ ಅವರ ಕಡೆಗೆ ದೀನದೃಷ್ಟಿಯನ್ನು ಹಾಕಿತು. ಆಗ ವಸಿಷ್ಠರು

ಕಣ್ಣೀರು ಹಾಕಿ-"ಅಯ್ಯೋ, ಬಡಪ್ರಾಣಿಯೆ, ನಾನೇನು ಮಾಡಲಿ? ಅತಿಥಿಯೂ ರಾಜನೂ ಜಯಶಾಲಿಯೂ ಆದ ಈತನು ಹೀಗೆ ಸುಲಿಗೆ ಮಾಡುತ್ತಿರುವದನ್ನು ನೀನು ತಿಳಿದೇ ಇರುವೆ"—ಎಂದು ಹೇಳಿದರು.

ಈ ಮಾತುಗಳು ಅವರ ಮುಖದಿಂದ ಹೊರಡುತ್ತಲೇ ನಂದಿನಿಯು ಒಂದು ಸಲ ಚತುರ್ದಿಕ್ಕುಗಳೂ ಕಿವುಡಾಗುವಂತೆ ಗುಟರು ಹಾಕಿತು. ಅದರ ಆರ್ಭಟವು ಆಕಾಶವನ್ನೂ ಪಾತಾಲವನ್ನೂ ಭೇದಿಸಿಕೊಂಡು ನಡೆಯಿತು. ಅದನ್ನು ರಕ್ಷಿಸುವದಕ್ಕಾಗಿ ಆ ಕ್ಷಣದಲ್ಲಿಯೇ ಅದರ ಪ್ರಭಾವದಿಂದ ಅಸಂಖ್ಯಾಕರಾದ ಯವನಯೋಧರು ಅಲ್ಲಿ ಸಿದ್ಧರಾದರು. ಅವರನ್ನು ಕಂಡೊಡನೆಯೇ ತನ್ನ ಪ್ರಬಲಸೈನಿಕರು ಇದುವರೆಗೂ ಗೆಲ್ಲಲಾರದ ಜನಾಂಗವನ್ನೆಲ್ಲ ವಸಿಷ್ಠರ ಬುದ್ಧಿಶಕ್ತಿಯು ಒಳಗುಮಾಡಿರುವದೆಂದು ವಿಶ್ವಾಮಿತ್ರರು ಆಗ ಯೋಚಿಸಿದರು. ಬುದ್ಧಿಶಕ್ತಿಯು ಮನುಷ್ಯವರ್ಗವನ್ನೇ ಅಧೀನಮಾಡಿಕೊಡಬಲ್ಲದೆಂದು ಈಗ ಅವರಿಗೆ ತಿಳಿಯಿತು.

## ವಿಶ್ವಾಮಿತ್ರರಿಗೆ ಸೋಲು

ಒಂದು ಕಡೆ ಆಯುಧಪಾಣಿಗಳಾದ ಕ್ಷತ್ರಿಯಯೋಧರು; ಇನ್ನೊಂದು ಕಡೆ ಯವನಯೋಧರು; ಇವರಿಬ್ಬರಿಗೂ ಘೋರವಾದ ಹೋರಾಟವಾಯಿತು. ನಂದಿನಿಯು ಅವರಿಬ್ಬರ ನಡುವೆ ನಿಂತಿತು. ಅಲ್ಲಿಂದ ತಪ್ಪಿಸಿಕೊಳ್ಳಲು ಅದು ಅನೇಕ ಸಲ ಹೊಂಚುಹಾಕಿತು. ಆದರೆ ಕ್ಷತ್ರಿಯರು ಅದನ್ನು ತಡೆದುಬಿಟ್ಟರು. ಯವನರು ಆ ಹಸುವನ್ನು ಬಿಡಿಸುವದಕ್ಕೆ ಯತ್ನವನ್ನು ಮಾಡಿದರು. ಕೇವಲ ಸಾಕ್ಷಿಮಾತ್ರನಾಗಿ ಇರುವ ಒಬ್ಬ ಬ್ರಾಹ್ಮಣನ ಪಕ್ಷವನ್ನು ಹಿಡಿದಿರುವ ಯವನರಿಗೂ ವೀರಾವೇಶದಿಂದ ಮುಂದುವರಿಯುತ್ತಿರುವ ವಿಶ್ವಾಮಿತ್ರರ ಕಡೆಯ ಕ್ಷತ್ರಿಯರಿಗೂ ಕಲಹವು ನಡೆಯಿತು. ದೀರ್ಘವಾದ ಕತ್ತಿಗಳು ಥಳಗುಟ್ಟಿದವು. ಊದ್ದವಾದ ಭರ್ಜಿಗಳು ನುಗ್ಗಿದವು. ಬಲವಾದ ಮುತ್ತು

ಭಾರವಾದ ಬಿಲ್ಲುಗಳ ಹೆದೆಗಳು ಝೇಂಕರಿಸಿದವು. ಕಾಲಮೇಘಗಳ ಗರ್ಜನೆಯಂಥ ಗದ್ದಲವು ದಶದಿಕ್ಕುಗಳನ್ನೂ ಮುಸುಕಿತು. ವಿಶ್ವಾಮಿತ್ರರು ತಮ್ಮ ಸೇನೆಯನ್ನು ನಡೆಸಿದರು. ವಸಿಷ್ಠರ ಪಕ್ಷದಲ್ಲಿ ನಡೆಸುವವರೇ ಇಲ್ಲ. ಅತಿಥಿಯ ಮೇಲೆ ಕೈಮಾಡುವದು ವಸಿಷ್ಠರ ಮನಸ್ಸಿಗೆ ಬರಲಿಲ್ಲ. ಆದ್ದರಿಂದ ಅವರು ಯುದ್ಧೋನ್ಮುಖರಾದ ತಮ್ಮ ಮಕ್ಕಳನ್ನೂ ಶಿಷ್ಯರನ್ನೂ ಕರೆದು—"ಕ್ಷತ್ರಿಯರ ಮಾತು ಹೇಗಾದರೂ ಇರಲಿ; ಕ್ಷಮಾಗುಣವೇ ಬ್ರಾಹ್ಮಣರ ಶಕ್ತಿ"—ಎಂದು ಹೇಳಿ ಅವರನ್ನು ತಡೆದುಬಿಟ್ಟರು.

ಬ್ರಾಹ್ಮಣರು ಕೈಯೆತ್ತಿ ಕಾದಲಿಲ್ಲ. ಆದರೆ ಕಲಹವು ಮಾತ್ರ ಬಲವಾಯಿತು. ಬ್ರಾಹ್ಮಣರ ಪಕ್ಷವನ್ನು ವಹಿಸಿದ ಯವನರ ಬಾಹುಬಲದಿಂದ ಆ ಕದನದಲ್ಲಾದ ರಕ್ತಪಾತವು ಹಳ್ಳವಾಗಿ ಹರಿದು ಸೈನಿಕರು ಬೀಳುತ್ತ ಬಂದರು. ಅವರ ರಥ, ರಥಿಕರು, ಗಜಾರೂಢರು, ರಾವುತರು, ಕಾಲಾಳುಗಳು ಲಕ್ಷಗಟ್ಟಲೆ ಸತ್ತುಬಿದ್ದರು. ಆಗ ವಿಶ್ವಾಮಿತ್ರರು ಭಯೋತ್ಪಾದಕವಾದ ಕತ್ತಿಯನ್ನು ಹಿಡಿದು ತಾವೇ ಆ ಯುದ್ಧದ ನಡುವೆ ನುಗ್ಗಿದರು. ಅವರ ಕತ್ತಿಯ ಬಂದೊಂದು ಹೊಡೆತಕ್ಕೆ ನೂರಾರು ಯವನರ ತಲೆಗಳು ಉರುಳುತ್ತಿದ್ದವು. ಆದರೆ ತಮ್ಮ ಪ್ರಯತ್ನವೆಲ್ಲ ವ್ಯರ್ಥವೆಂದು ಅವರಿಗೆ ಅಷ್ಟರಲ್ಲಿಯೇ ಗೊತ್ತಾಯಿತು. ಏಕೆಂದರೆ ಒಂದು ಸಲ ನಂದಿನಿಯು ಗುಟರುಹಾಕುತ್ತಲೆ ಒಂದು ಹೊಸ ಅಕ್ಷೋಹಿಣೀಸೇನೆಯು ಬಂದು ನಿಲ್ಲುತ್ತಿತ್ತು. ನೆಲೆಯಿಲ್ಲದೆ ತಂಡತಂಡವಾಗಿ ಬರುತ್ತಿದ್ದ ಅವರ ದೆಸೆಯಿಂದ ವಿಶ್ವಾಮಿತ್ರರ ಕಡೆಯ ಒಳ್ಳೆಯ ಅನುಭವಿಗಳಾದ ಕೋಟ್ಯನುಕೋಟಿ ಯೋಧರು ನಾಶವಾಗುತ್ತಿದ್ದರು. ಆಗ ವಿಶ್ವಾಮಿತ್ರರು "ಆ ಹಸುವನ್ನು ಕೊಲ್ಲಿರಿ" ಎಂದಾಜ್ಞಾಪಿಸಿದರು.

ಆದರೆ ಅದು ಇನ್ನೂ ಕ್ಷತ್ರಿಯರ ಕೈಗೆ ಸಿಕ್ಕಿರಲಿಲ್ಲ. ಅವರು ಭರ್ಜಿಗಳನ್ನು ಉಪಯೋಗಿಸಿ ಅದನ್ನುಕೊಲ್ಲುವ ಯತ್ನವನ್ನು ಮಾಡುತ್ತಲೆ ಅದು ಒಬ್ಬ ಸ್ತ್ರೀರೂಪವನ್ನು ತಾಳಿ ಆಕಾಶಕ್ಕೆ ಹಾರಿತು. ಅಲ್ಲಿ ಆಕೆಗೆ ಬಿಳಿಯ ಕಮಲದ ಹೇರ; ಬಿಳಿಯ ವಸ್ತ್ರಗಳ ಉಡುವು. ಆಕೆಯ

ಶುಭ್ರಕಾಂತಿಯ ಮುಂದೆ ಹುಣ್ಣಿಮೆಯ ಪೂರ್ಣಚಂದ್ರನು ಬಣ್ಣ ಗುಂದಿ ತೋರುವಂತಿತ್ತು. ಆಕೆಯ ಕೈಯಲ್ಲೊಂದು ಬಿಳಿಯ ವೀಣೆ. ಮೈತುಂಬ ಬಿಳಿಯ ಕಮಲಗಳಿಂದ ಅಲಂಕಾರ. ಆಕೆಯು ತನ್ನ ಆಶ್ಚರ್ಯಕರವಾದ ಸೌಂದರ್ಯದಿಂದ ಪ್ರಪಂಚವನ್ನೇ ಬೆಳಗುತ್ತ ವಿಶ್ವಾಮಿತ್ರರನ್ನು ಕುರಿತು—"ಎಲೆ, ಬುದ್ಧಿಹೀನ! ನಾನು ಬ್ರಾಹ್ಮಣರ ಬುದ್ಧಿದೇವತೆ. ನನ್ನನ್ನು ಕಸುಕೊಳ್ಳುವದಕ್ಕೆ ನಿನ್ನಿಂದೇನಾದೀತು? ನಾನು ಇದುವರೆಗೂ ಬ್ರಾಹ್ಮಣರಲ್ಲಿಯೇ ಇದ್ದೆನು; ಈಗಲೂ ಇದ್ದೇನೆ; ಮುಂದೆಯೂ ಇರುವೆನು"—ಎಂದು ಹೇಳಿದಳು. ವಿಶ್ವಾಮಿತ್ರರಿಗೆ ಆಶ್ಚರ್ಯವಾಯಿತು. ಆಗ ಆ ಸರಸ್ವತಿಯು ಮತ್ತೆ ಹಸುವಿನ ರೂಪವನ್ನು ತಾಳಿ ವಸಿಷ್ಠರ ಹತ್ತಿರಕ್ಕೆ ಇಳಿದಳು. ಸೇನೆಯೆಲ್ಲ ಮಾಯವಾಯಿತು. ವಸಿಷ್ಠರ ಕಣ್ಣುಗಳಿಂದ ಆನಂದಾಶ್ರುಗಳು ಸುರಿದವು. ಅವರು ತಮ್ಮ ಕೈಗಳಿಂದ ಆ ಹಸುವಿನ ಮೈಯನ್ನು ತಡವರಿಸಿ ಲಾಲಿಸಿದರು. ವಿಶ್ವಾಮಿತ್ರರು ನಿರ್ವೀರ್ಯರಾದರು.

ವಿಶ್ವಾಮಿತ್ರರ ಭಾಗಕ್ಕೆ ಇದೇ ಮೊದಲನೆಯ ಸೋಲು. ಮಾನಭಂಗದಿಂದಲೂ ದುಃಖದಿಂದಲೂ ಅಸೂಯೆಯಿಂದಲೂ ಪೀಡಿತರಾದ ಅವರು ಇನ್ನು ವಸಿಷ್ಠರ ಕಡೆಗಾಗಲಿ ಹಸುವಿನ ಕಡೆಗಾಗಲಿ ಒಮ್ಮೆಯಾದರೂ ಕಣ್ಣೆತ್ತಿಯೂ ನೋಡಲಿಲ್ಲ. ಸಿಟ್ಟಿನಿಂದ ಅವರು ಬಿಲ್ಲುಬಾಣಗಳನ್ನು ಬಿಸುಟು ಸೈನಿಕರನ್ನೆಲ್ಲ ಮನೆಗೆ ಹಿಂದಿರುಗಹೇಳಿ ರಾಜ್ಯಭಾರವನ್ನು ಮಂತ್ರಿಗಳಿಗೆ ಒಪ್ಪಿಸಿ— "**ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋಬಲಂ ಬಲಮ್**"—ಎಂದರೆ— "ಕ್ಷತ್ರಿಯಬಲಕ್ಕೆ ಧಿಕ್ಕಾರವಿರಲಿ; ಬ್ರಹ್ಮತೇಜಸ್ಸಿನ ಬಲವೇ ಬಲವು."—ಎಂದು ಹೇಳುತ್ತ ಬ್ರಹ್ಮನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿ ಬ್ರಹ್ಮತೇಜಸ್ಸನ್ನು ಪಡೆಯುವದಕ್ಕಾಗಿ ಹಿಮಾಲಯಪರ್ವತವನ್ನು ಹೊಕ್ಕರು.

ಹೀಗೆ ದಂಡೋಪಾಯದಿಂದ ಪ್ರಪಂಚವನ್ನೆಲ್ಲ ಒಂದು ಮಾಡುತ್ತೇನೆಂಬ ಯಾವ ಪ್ರಯತ್ನದಲ್ಲಿಯೂ ಹುರುಳಿಲ್ಲವೆಂದು ವಿಶ್ವಾಮಿತ್ರರು ಈಗ ಮನಗಂಡರು.



# ಮೂರನೆ ಸನ್ನಾಹ



## ವಿಶ್ವಾಮಿತ್ರರ ತಪಶ್ಚರ್ಯ

ವಿಶ್ವಾಮಿತ್ರರು ಎಲ್ಲಿಗೆ ಹೋದರೋ ಯಾರಿಗೂ ತಿಳಿಯದು. ಸೈನಿಕರೊಡನೆ ಅವರು ನಗರಕ್ಕಂತು ಹಿಂದಿರುಗಲಿಲ್ಲ. ರಾಜಕಾರ್ಯವನ್ನು ಅವರ ಮಂತ್ರಿಯೇ ನೋಡುತ್ತಿದ್ದನು. ಅವರ ಮನೆಯ ಜನರು ದಿನಗಟ್ಟಲೆ ತಿಂಗಳುಗಟ್ಟಲೆ ಮತ್ತು ವರ್ಷಗಟ್ಟಲೆ ಅವರು ತಿರುಗಿ ಬರುವದನ್ನೇ ನೋಡುತ್ತಿದ್ದರು. ವಸಿಷ್ಠರು ತಮ್ಮ ಮನೋಗತದಂತೆ ಮತ್ತೆ ಬ್ರಾಹ್ಮಣರನ್ನೂ ಕ್ಷತ್ರಿಯರನ್ನೂ ಒಂದಾಗಿ ಮಾಡುವದಕ್ಕೆ ಯತ್ನಿಸಿದರು. ಅದು ಸಾಗಲಿಲ್ಲ. ಏಕೆಂದರೆ ವಿಶ್ವಾಮಿತ್ರರ ಕಡೆಯವರು ಅವರ ವಿಷಯದಲ್ಲಿ ಅತ್ಯಂತದ್ವೇಷಿಗಳಾಗಿದ್ದರು.

ಇಷ್ಟರಲ್ಲಿ ವಿಶ್ವಾಮಿತ್ರರು ಅತ್ಯುಗ್ರವಾದ ತಪಶ್ಚರ್ಯದಿಂದ ಧ್ಯಾನದಲ್ಲಿ ಪರವಶರಾಗಿದ್ದರು. "ತಾನೊಬ್ಬ ಬ್ರಾಹ್ಮಣನಾಗಬೇಕು; ಬ್ರಾಹ್ಮಣರನ್ನೂ ಕ್ಷತ್ರಿಯರನ್ನೂ ತನ್ನ ಬಾಹುಬಲದಿಂದ ಒಂದುಮಾಡಬೇಕು; ಸಾಗರಾಂತವಾದ ಈ ಭೂಮಂಡಲದಲ್ಲಿ ತನಗೆ ಪ್ರತಿಕಕ್ಷಿಯು ಯಾರೂ ಇರಕೂಡದು; ಮತ್ತು ಒಬ್ಬ ರಾಜನ ಕೆಳಗೆ ಎಲ್ಲರೂ ಒಂದಾಗಬೇಕು"—ಎಂಬದು ಅವರ ಉದ್ದೇಶ. ಅವರು ಹಿಮಾಲಯದಲ್ಲಿ ಭಯಂಕರವಾಗಿ ದುರ್ಗಮವಾಗಿರುವ ಪ್ರದೇಶಕ್ಕೆ ಹೋಗಿ ಅಲ್ಲಿ ಅತ್ಯುಗ್ರವಾದ ತಪಶ್ಚರ್ಯವನ್ನು ಮೊದಲುಮಾಡಿದರು. ಮೊದಲನೆಯ ದಿವಸ ಅವರು ಒಂದು ತುತ್ತು ಆಹಾರವನ್ನು ತೆಗೆದುಕೊಂಡರು. ಎರಡನೆಯ ದಿನ ಅರ್ಧಮಾತ್ರ. ಆಮೇಲೆ ಅವರು ಒಂದು ಕಾಳು, ಒಂದು ತೊಟ್ಟು ನೀರು–ಹೀಗೆ ಮಾಡಿ ಕೊನೆಗೆ ಆಹಾರವನ್ನು ಬಿಟ್ಟೇ ಬಿಟ್ಟು ಸಂಪೂರ್ಣವಾಗಿ ಧ್ಯಾನದಲ್ಲಿಯೇ ಮುಳುಗಿಹೋದರು. ಅವರ ಶರೀರವು ಕ್ಷೀಣಿಸಿತು. ಅವರು ಚಳಿಗಾಲ, ಮಳೆಗಾಲ, ವಸಂತಕಾಲ, ಗ್ರೀಷ್ಮಕಾಲ—ಇವುಗಳಿಗೆಲ್ಲ ಮೈಯೊಡ್ಡಿದರೂ ಅವುಗಳೇನೂ ಅವರ

ಮನಸ್ಸಿಗೆ ಹತ್ತಿದಷ್ಟು ಅವರು ಧ್ಯಾನದಲ್ಲಿಯೇ ನಿರತರಾಗಿದ್ದರು. ಅವರ ಕಣ್ಣುಗಳ ಗುಡ್ಡೆಗಳು ಹೂತುಹೋಗಿದ್ದವು; ಮೂಗಿನ ಎಲುಬು ಮಾತ್ರ ಕಾಣುತ್ತಿತ್ತು. ಅವರ ಎಲುಬುಗಳಿಗೆ ಚರ್ಮವು ಮಾತ್ರ ಹತ್ತಿಕೊಂಡಿತ್ತು. ಅವರ ಕೂದಲುಗಳು ಉದ್ದವಾಗಿ ಬೆಳೆದು ನೆಲದ ಮೇಲೆ ಗುಡ್ಡೆಯಾಗಿ ಬಿದ್ದವು. ಅವರ ಕಾಲ ಬೆರಳಿನ ಉಗುರು ನೆಲದೊಳಕ್ಕೆ ಹೊಕ್ಕು ಮರದ ಬೇರಿನಂತೆ ತೋರಿತು. ಅವರ ಧ್ಯಾನಕ್ಕೆ ಕೊನೆಯೇ ಇಲ್ಲ. ಹುಲಿಗಳೂ ಕರಡಿಗಳೂ ಉಳಿದ ಮಾಂಸಾಹಾರಿಗಳಾದ ಮೃಗಗಳೂ ಅವರನ್ನು ಕಂಡರೆ ದೂರದಿಂದಲೇ ಬಾಲವನ್ನು ಮುದುರಿಕೊಂಡು ಓಡುತ್ತಿದ್ದವು.

ಈ ಭಯಂಕರವಾದ ಸ್ಥಿತಿಯಲ್ಲಿ ವಿಶ್ವಾಮಿತ್ರರಿಗೆ ಬಗೆಬಗೆಯಾದ ಭ್ರಾಂತಿಯುಂಟಾಯಿತು. ಕೆಲವು ವೇಳೆ ಈ ಪ್ರಪಂಚವೆಲ್ಲ ಅಣುಗಳ ರೂಪಕ್ಕೆ ತಿರುಗಿದ ಹಾಗೂ ಆಮೇಲೆ ತನ್ನ ಶರೀರವು ಬೆಳೆದು ಪ್ರಪಂಚವನ್ನೆಲ್ಲ ತುಂಬಿಕೊಂಡ ಹಾಗೂ ಆಗಿ ಧಗಧಗಿಸುವ ಆ ಶರೀರಪ್ರಭೆಯ ಜ್ವಾಲೆಯು ಆ ಅಣುಗಳನ್ನು ಸುಡುತ್ತ ಸುಡುತ್ತ ತನ್ನ ಶರೀರವೇ ಸುಡುತ್ತಿರುವ ಹಾಗೂ ಭಾವನೆಯುಂಟಾಯಿತು. ಒಳಗೇ ಉಂಟಾದ ಈ ತಾಪವು ಧ್ಯಾನಕ್ಕೆ ಅಡ್ಡಬಂದು ಅವರಿಗೆ ಎಚ್ಚರವನ್ನುಂಟು ಮಾಡಿತು.

ಕಣ್ಣುಬಿಟ್ಟು ನೋಡಲಾಗಿ ಮುಂದೆ ಸುತ್ತಲೂ ಕುಣಿಯುತ್ತ ಅಪ್ಸರಸ್ತ್ರೀಯರಿಗಿಂತಲೂ ಅತಿಸುಂದರಿಯರಾದ ಕೆಲವರು ತರುಣಿಯರು ವಿಷಯಾಸಕ್ತಿಯಿಂದ ತುಂಬಿ ಮೋಹಕವಾಗಿರುವ ತಮ್ಮ ದೇಹವನ್ನು ಒಲೆದಾಡಿಸುತ್ತಿದ್ದರು. ಕೆಲವರು ಅರ್ಧ ಬತ್ತಲೆಯಾಗಿ ಸೊಂಟದ ಮೇಲೆ ಕೈಗಳನ್ನಿಟ್ಟುಕೊಂಡು ನಿಂತಿದ್ದರು. ಇನ್ನು ಕೆಲವರು ಕ್ಷಣಕಾಲ ಗಂಭೀರವಾಗಿಯೂ ಕ್ಷಣಕಾಲ ಚಂಚಲವಾಗಿಯೂ ಇರುವ ಮೋಹಕವಾದ ತಮ್ಮ ಕಣ್ಣುಗಳಿಂದ ತಮ್ಮ ಅಭೀಷ್ಟವನ್ನು ಸ್ಪಷ್ಟವಾಗಿ ತಿಳಿಸುವಂತೆ ತಿರುಗಿಸುತ್ತ ಓರೆಗಣ್ಣಿನಿಂದ ನೋಡುತ್ತಿದ್ದರು. ಅವರ ಕಣ್ಣ ರೆಪ್ಪೆಗಳು ನಡುಗುತ್ತಿದ್ದವು. ಅವರ ನೋಟ

ಗಳು ಮೊದಲು ಸಾಮಾನ್ಯವಾಗಿದ್ದು ಕೊನೆಗೆ ಮಿಂಚಿನಂತೆ ವೇಗ ವುಳ್ಳವುಗಳಾಗಿದ್ದವು. ಕೆಲವರು ಜಡೆಯನ್ನು ಹೆಣೆದುಕೊಂಡಿದ್ದರು. ಕೆಲವರಿಗೆ ಉಂಗುರಗೂದಲಿತ್ತು. ಉಳಿದವರ ಕೂದಲುಗಳು ಗಾಳಿ ಯಲ್ಲಿ ಸ್ವಲ್ಪಸ್ವಲ್ಪ ಹಾರಾಡುತ್ತಿದ್ದವು. ಅನೇಕ ಬಗೆಗಳಲ್ಲಿ ಅವರು ತಮ್ಮ ಬೆಡಗಿನ ಯುಕ್ತಿಯನ್ನೆಲ್ಲ ತೋರಿಸಿದರು. ಅವರ ವಿಷಯ ವಾಸನೆ ವಿಶ್ವಾಮಿತ್ರರ ಕಡೆಗೆ ಮಾತ್ರವೇ ಇತ್ತು. ಇದರಿಂದ ತಮಗೆ ಉಂಟಾದ ಅಂತಸ್ತಾಪವು ಕಡಿಮೆಯಾದ ಮೇಲೆ ಅವರು ಮತ್ತೆ ಧ್ಯಾನದಲ್ಲಿಯೇ ಮಗ್ನರಾದರು.

ಆಮೇಲೆ ಅವರಿಗೆ ಇನ್ನೊಂದು ರೀತಿಯಲ್ಲಿ ತೋರುವದಕ್ಕೆ ಮೊದಲಾಯಿತು. ಲಕ್ಷಾಂತರ ಸೂರ್ಯರು ಹುಟ್ಟಿದರು. ಅವರ ಪ್ರಕಾಶವು ಕಣ್ಣುಗಳನ್ನು ಕುಕ್ಕಿ ಮಂಜುಮಂಜಾಗಿ ಮಾಡಿ ಶರೀರ ವನ್ನು ಕಂದಿಸಿತು. ವಿಶ್ವಾಮಿತ್ರರು ಅವುಗಳನ್ನು ಬಿಟ್ಟು ಕೆಲವು ದೂರ ಓಡುವದಕ್ಕೆ ಮೊದಲುಮಾಡಿದರು. ಅವರು ಓಡುತ್ತ ಓಡುತ್ತ ಆ ಕಿರಣಗಳು ಶಾಂತಸ್ವಭಾವವುಳ್ಳವುಗಳಾಗುವವರೆಗೂ ಓಡಿಯೇ ಓಡಿ ದರು. ಆದರೆ ಅವರು ಓಡಿಹೋದ ಸ್ಥಲದಲ್ಲಿ ಸಾವಿರಾರು ಹಾವುಗಳು ಬಂದು ಅವರನ್ನು ಕಚ್ಚಿ ಕೆಡವಿದವು. ಆ ವಿಷಜ್ವಾಲೆಯು ಅವರನ್ನು ಸಮಾಧಿಯಿಂದ ಎಬ್ಬಿಸಿತು.

ಈಗ ಅವರಿಗೆ ಬಹುಭಯಂಕರವಾದ ನೋಟವು ಸಂಘಟಿಸಿತು. ಭಯಂಕರವಾದ ಮೃಗಗಳು ಅವರನ್ನು ಹೆದರಿಸಿದವು. ಕೆಲವಕ್ಕೆ ಕರಡಿ ಗಳಂತೆ ಬಾಯಿ; ಕೆಲವಕ್ಕೆ ಸಿಂಹಗಳ ಕೇಸರ; ಕೆಲವಕ್ಕೆ ಮೈಲಿಗಟ್ಟಲೆ ಉದ್ದವಾದ ಬಾಲಗಳು; ಇನ್ನು ಕೆಲವಕ್ಕೆ ತಲೆಯ ಮೇಲೆ ಕಣ್ಣು; ಕೆಲವು ತಿಂಡಿಯನ್ನು ಹುಡುಕಿಕೊಂಡು ತಡವರಿಸುತ್ತ ಕಂಡಕಂಡ ದ್ದನ್ನೆಲ್ಲ ಮುಕ್ಕುತ್ತ ಇರುವ ವೇತಾಲಗಳು; ಕೆಲವಕ್ಕೆ ಕರಡಿಯ ಹಾಗೆ ಕೋರೆಯ ಹಲ್ಲು; ಇನ್ನು ಕೆಲವಕ್ಕೆ ಆನೆಯ ಹಾಗೆ ದಂತಗಳು; ಕೆಲವಕ್ಕೆ ಪರ್ವತಶಿಖರದಂಥ ತಲೆಗಳು; ಮತ್ತೆ ಕೆಲವಕ್ಕೆ ತಲೆಗಳಿದ್ದರೂ ಕಾಲುಗಳಿಲ್ಲ; ಕೆಲವು ಸ್ತ್ರೀಭೂತಗಳಿಗೆ ಜೋಲಾಡುವ ಪರ್ವತಶಿಖರ

ದಂತಿರುವ ಕಪ್ಪು ಮೊಲೆಗಳು. ಕೆಲವು ಕಪ್ಪು; ಕೆಲವು ಸೀಲಿ; ಉಳಿದವು ಹಳದಿ; ಹೀಗೆ ಬೇರೆಬೇರೆ ಬಣ್ಣಗಳನ್ನುಂಟಾಗಿ ಅವು ನೋಡಿದವರಿಗೆ ಅಂಜಿಕೆಯನ್ನುಂಟುಮಾಡುತ್ತಿದ್ದವು.

ಈ ಏಕಾರವಾದ ಸೇನೆಯು ಆದರ ಯಜಮಾನನ ಅಪ್ಪಣೆಯಂತೆ ಬಂದು ತಮ್ಮನ್ನು ಮುತ್ತಿದಾಗ ವಿಶ್ವಾಮಿತ್ರರು ಅವುಗಳ ಕಡೆಗೆ ಕಣ್ಣುಹಾಕುತ್ತಲೆ ಆ ದುಷ್ಟಪಿಶಾಚಸೇನೆಯು ನೆಗ್ಗಿ ನೆಲಾಹಿಡಿಯಿತು. ಕೆಲವಕ್ಕೆ ಕಾಲು ಮುರಿಯಿತು. ಕೆಲವು ಸತ್ತವು. ಉಳಿದವುಗಳ ತಲೆ ಜಜ್ಜಿ ಬಜ್ಜಿಯಾಯಿತು. ಕೆಲವಕ್ಕೆ ಜೋತಾಡುತ್ತಿದ್ದ ಮೊಲೆಗಳು ಕತ್ತರಿಸಿ ಹೋಗಿ ಮೈ ಹಗುರವಾಯಿತು. ಒಂದರ ತಲೆ ಇನ್ನೊಂದರ ಹಲ್ಲಿಗೆ ತಾಕಿತು. ಒಂದರ ಕಾಲು ಇನ್ನೊಂದರ ತಲೆಗೆ ಬಡಿಯಿತು.

ಹೀಗೆ ದುಷ್ಟಪಿಶಾಚಗಳ ಸೇನೆಯು ನಾಶವಾದದ್ದನ್ನು ಕಂಡು ಅದರ ಯಜಮಾನನು ತಾನು ಮೆಲ್ಲಗೆ ವಿಶ್ವಾಮಿತ್ರರನ್ನು ವಶಮಾಡಿಕೊಳ್ಳಬೇಕೆಂದು ಮುಗುಳುನಗೆಯಿಂದ ವಿಶ್ವಾಮಿತ್ರರ ಬಳಿಗೆ ಬಂದು– ''ಅಯ್ಯ, ವಿಶ್ವಾಮಿತ್ರನೆ, ನೀನು ಅತ್ಯಂತ ಬಲಶಾಲಿಯು. ನೀನು ಬಾಹುಬಲದಿಂದ ಸಮಸ್ತರನ್ನೂ ಜಯಿಸಿರುವೆ. ತಪಶ್ಚರ್ಯದಿಂದ ಪಡೆದ ಶಕ್ತಿಗಳ ಸಹಾಯದಿಂದ ನಿನ್ನ ನೋಟವೇ ನನ್ನ ಪಿಶಾಚಸೇನೆಯ ಮೇಲೆ ಇಷ್ಟರ ಅನಾಹುತವನ್ನುಂಟುಮಾಡಿದೆ; ಆದ್ದರಿಂದ ನೀನು ನನ್ನ ಮಗನಾಗು. ಈ ಕಾಣುವ ವಿಶಾಲವಾದ ಬ್ರಹ್ಮಾಂಡದಲ್ಲಿ ಸಮಸ್ತರಾದ ಅಸುರರೂ ದೈತ್ಯರೂ ದಾನವರೂ ಭೂತಗಳೂ ವೇತಾಲಗಳೂ–ಎಲ್ಲವೂ ನನ್ನಧೀನ; ನನ್ನನಂತರ ನೀನೇ ಅದಕ್ಕೆಲ್ಲ ಯಜಮಾನನಾಗುವೆ. ಈಗಲೇ ನಿನಗೆ ರಾಜಪೀಠದಲ್ಲಿ ಪಟ್ಟಾಭಿಷೇಕವನ್ನು ಮಾಡಿ ನಾನು ವಿಷಯಾನುಭವವನ್ನು ಮಾಡಿಕೊಂಡು ಸುಖದಿಂದಿರುವೆನು. ಆದದ್ದರಿಂದ ನನ್ನ ಮಗನಾಗು. ಹಿಮಾಲಯದ ತುದಿಗೆ ಹತ್ತು. ಸುತ್ತಲೂ ಫಲವತ್ತಾದ ಭೂಮಿಗಳು ಲೆಕ್ಕವಿಲ್ಲದಷ್ಟು ಕಣ್ಣಿಗೆ ಬೀಳುವವು. ಎಲ್ಲವೂ ನಿನ್ನದೆ. ಚೀನ, ಜಪಾನ್, ಪರ್ಷ್ಯ—ಎಲ್ಲವೂ ನಿನ್ನಧೀನ. ನಿನ್ನನ್ನು ಮೋಹಗೊಳಿಸುವದಕ್ಕೆ ಬಂದ ಸ್ತ್ರೀಯರೂ ನನ್ನವರು. ಅವರೆಲ್ಲರೂ ನಿನ್ನವರಾಗುವರು. ನಿನಗೆ ಕಾಣುವ ಎಲ್ಲ

ರತ್ನಗಳೂ ಮುತ್ತುಗಳೂ ಮತ್ತು ಚಿನ್ನದ ಗಣಿಗಳೂ ನನ್ನವು. ನನ್ನ ವಿಷಯದಲ್ಲಿ ನಮ್ರತೆಯಿಂದ ನಡೆಯುತ್ತಿರುವವರ ಸಂಖ್ಯೆಯು ಎಣಿಕೆಗೆ ಬರುವಹಾಗಿಲ್ಲ. ನೀನು ನನ್ನ ಮಗನಾಗಿ ಈ ಸರ್ವೋತ್ಕೃಷ್ಟವಾದ ಎಲ್ಲ ರಾಜ್ಯಕ್ಕೂ ಏಕಚ್ಛತ್ರಾಧಿಪತಿಯಾಗು. ನೀನು ಹೆದರುವದಕ್ಕೂ ಸಂಶಯಪಡುವದಕ್ಕೂ ಏನೇನೂ ಕಾರಣವಿಲ್ಲ. ನೀನು ಸರಿಯಾಗಿ ನೆಲೆಗೆ ನಿಲ್ಲುವವರೆಗೂ ನಾನು ನಿನ್ನ ಬಳಿಯಲ್ಲಿಯೇ ಇದ್ದು ರಾಜ್ಯ ರಕ್ಷಣೆಗೆ ಸಹಾಯವನ್ನು ಮಾಡುವೆನು.''—ಎಂದು ಹೇಳಿದನು.

ಆಗ ವಿಶ್ವಾಮಿತ್ರರು—''ಎಲೈ ಭೂತನಾಥನೆ, ನನಗೆ ಬ್ರಾಹ್ಮಣ ಪದವಿಯನ್ನು ಕೊಡಬಲ್ಲೆಯ? ನನಗೆ ನಂದಿನಿಯನ್ನು ಕೊಡಬಲ್ಲೆಯ? ನನಗೆ ಜ್ಞಾನವನ್ನು ಕೊಡಬಲ್ಲೆಯ? ನನಗೆ ಸರಸ್ವತಿಯನ್ನು ಕೊಡಬಲ್ಲೆಯ?''—ಎಂದು ಕೇಳಲು ಭೂತನು— ''ಇಲ್ಲ; ನನ್ನಿಂದಾಗದು. ಬ್ರಾಹ್ಮಣರೊಡನೆ ಹೋರಾಡುವ ಶಕ್ತಿಯನ್ನು ಕೊಟ್ಟೇನು; ನಂದಿನಿಯನ್ನು ಕೊಂದೇನು; ಜ್ಞಾನವನ್ನು ನಿರ್ಮೂಲಮಾಡೇನು; ಆದರೆ ಸರಸ್ವತಿಯ ವಿಷಯದಲ್ಲಿ ಏನು ಮಾಡುವದಕ್ಕೂ ನನ್ನಿಂದಾಗುವದಿಲ್ಲ''—ಎಂದು ಉತ್ತರವನ್ನಿತ್ತನು.

ಆಗ ವಿಶ್ವಾಮಿತ್ರರು—''ಹಾಗಾದರೆ ನಿನ್ನಿಂದ ನನಗೆ ಏನೂ ಪ್ರಯೋಜನವಿಲ್ಲ''—ಎಂದು ಹೇಳಿ ಮತ್ತೆ ಧ್ಯಾನದಲ್ಲಿ ಮಗ್ನರಾಗುವದಕ್ಕೆ ಹೋದರು.

## ಮಂತ್ರದರ್ಶನ

ಇನ್ನು ಕಣ್ಣುಮುಚ್ಚಿಕೊಂಡು ಕುಳಿತುಕೊಳ್ಳುವದಕ್ಕೆ ಈಗ ಅವರಿಗೆ ಎಷ್ಟುಮಾತ್ರವೂ ಸಾಧ್ಯವಾಗಲಿಲ್ಲ. ಏಕೆಂದರೆ ಏಕಪ್ರಕಾರವಾಗಿ ಬಹುಕಾಲ ಉಸಿರನ್ನು ಹಿಡಿತದಲ್ಲಿಟ್ಟುಕೊಂಡು ಮನಸ್ಸನ್ನು ಒಂದೇ ವಿಷಯದ ಮೇಲೆ ತಪ್ಪದೆ ನಿಲ್ಲಿಸಿಕೊಂಡು ಕಣ್ಣುಗಳನ್ನು ಎಡೆಬಿಡದೆ ಮುಚ್ಚಿಕೊಂಡೇ ಇದ್ದದ್ದರಿಂದ ಈಗ ಅವು ಮುಚ್ಚಿಕೊಳ್ಳುವದಕ್ಕೆ ಬರಲಿಲ್ಲ. ಇದುವರೆಗಿನ ಅವರ ಹಠಯೋಗದ ಬಲದಿಂದ ಅವರ ಮೂಗಿನ ಸೊಳ್ಳೆಗಳಿಂದ ಬೆಂಕಿಯ ಕಿಡಿಗಳು ಮಿನುಗುತ್ತ ಹೊರ

ಬೀಳುತ್ತಿದ್ದವು. ಬೀಸುವ ಯಂತ್ರಗಳಲ್ಲಿ ಆದ ಶಬ್ದದಂತೆ ಅವರ ಕರ್ಣರಂಧ್ರಗಳಿಂದ ವಿಧವಿಧವಾದ ನಾದಗಳು ಹೊರಡುತ್ತಿದ್ದವು. ಒಳಗಣ ಉಷ್ಣಾಧಿಕ್ಯದಿಂದ ಅವರ ನೆತ್ತಿಯು ಬಾಯಿಯು ಮೇಲ್ಮುಖವಾಗಿ ಹೊಡೆದುಕೊಳ್ಳುತ್ತಿತ್ತು. ಬ್ರಹ್ಮಾಂಡವೆಲ್ಲ 'ಡಂ ಡಂ' ಎಂಬ ಶಬ್ದದಿಂದ ತುಂಬಿ ಹೋದಂತೆ ಕೇಳಿಸುವದಕ್ಕಾರಂಭವಾಯಿತು. ರಾಶಿಚಕ್ರವು ಬಲದಿಂದ ಎಡಕ್ಕೆ ತಿರುಗುತ್ತ ಅವರನ್ನು ಸುತ್ತುವಂತೆ ಕಂಡಿತು. ಮತ್ತು ಆಗ ಹುಟ್ಟಿದ ಶಬ್ದವು ಈ ಬ್ರಹ್ಮಾಂಡದ ಕಿರೀಟಪ್ರಾಯವಾದ ಮೇಘಮಂಡಲವನ್ನು ಸೀಳಿಕೊಂಡು ಅದರ ಬಿರುಕಿನಲ್ಲಿ ಸುಸುಳಿಹೋಯಿತು.

ಈ ಗದ್ದಲದ ನಡುವೆ ಬಹುದೂರದಲ್ಲಿ ಲಕ್ಷಾಂತರಮೇಘಗಳ ಗರ್ಜನೆಗಳು ನಿಲುಗಡೆ ಇಲ್ಲದೆ ಆದಷ್ಟು ಗಟ್ಟಿಯಾಗಿ—''**ನಮ್ಮೆಲ್ಲರ ಬುದ್ಧಿಗೆ ಪ್ರೇರಕನಾದ ಮತ್ತು ಜಗತ್ಕಾರಣನಾದ ಪರಮಾತ್ಮನ ದಿವ್ಯತೇಜಸ್ಸನ್ನು ಧ್ಯಾನಮಾಡುತ್ತೇನೆ**''-ಎಂಬರ್ಥವನ್ನು ಕೊಡುವ ಒಂದು ವೇದವಾಕ್ಯವು ಕೇಳಬಂತು. ಆ ಶಬ್ದವು ವಿಶ್ವಾಮಿತ್ರರ ಕಿವಿಗೆ ಬೀಳುತ್ತಲೆ ಕ್ಷಣಮಾತ್ರದಲ್ಲಿ ಅವರ ಶರೀರವು ಶಕ್ತಿಗೂಡಿ ಕಾಂತಿಯುಕ್ತವಾಗಿ ಉಬ್ಬಿಕೊಂಡಿತು. ಆಗ ಆನಂದಾಶ್ರುಗಳನ್ನು ಸುರಿಸುತ್ತ ಅವರು—''ನಾನು ಒಂದು ಪಕ್ಷ ಬ್ರಾಹ್ಮಣಪದವಿಯನ್ನು ಪಡೆಯದೆ ಹೋದರೂ ವೇದಮಂತ್ರದರ್ಶನದ ಅಧಿಕಾರವು ಬ್ರಾಹ್ಮಣರಿಗೆ ಮಾತ್ರ ಮೀಸಲೆಂಬುದನ್ನಾದರೂ ತಪ್ಪಿಸಿದ್ದೇನೆ. ಇಷ್ಟು ದಿವಸದ ತಪಶ್ಚರ್ಯಕ್ಕೆ ಪ್ರತಿಫಲವಾಗಿ ಅತ್ಯುತ್ತಮವಾದ ಈ ವೇದಮಂತ್ರದ ದರ್ಶನವು ನನಗೆ ಲಭ್ಯವಾಯಿತು. ಆಗಲಿ; ಇನ್ನೂ ಬಿಡದೆ ಪ್ರಯತ್ನಮಾಡುವೆನು.''—ಎಂದು ಹೇಳುತ್ತ ಅವರು ಮತ್ತೆ ಪ್ರಬಲವಾದ ಪ್ರಯತ್ನದಿಂದ ಧ್ಯಾನನಿಷ್ಠರಾದರು.

## ಋಷಿಗಳ ಸಭೆ

ವಿಶ್ವಾಮಿತ್ರರ ತಪಶ್ಚರ್ಯದ ದೆಸೆಯಿಂದ ಲೋಕಕ್ಕಾದ ಉಗ್ರವಾದ ಕಳವಳವನ್ನು ನೋಡಿ ಯಾರೂ ಸುಮ್ಮನಿರುವದಕ್ಕಾಗಲಿಲ್ಲ. ಆದ್ದರಿಂದ ವಿಶ್ವಾಮಿತ್ರರನ್ನು ಒಬ್ಬ ಬ್ರಾಹ್ಮಣನನ್ನಾಗಿ ಮಾಡಿಬಿಡುವ ಉದ್ದೇಶದಿಂದ ಬ್ರಹ್ಮರ್ಷಿಗಳೆಲ್ಲರನ್ನೂ ಸೇರಿಸಿ ಒಂದು ಸಭೆಯನ್ನು ಮಾಡಬೇಕೆಂದು ಬ್ರಹ್ಮನು ಎಲ್ಲರಿಗೂ ಹೇಳಿಕಳುಹಿಸಿದನು. ಅದರಂತೆ ಕಣ್ವರು, ವಸಿಷ್ಠರು ಮತ್ತು ಉಳಿದ ಬ್ರಹ್ಮರ್ಷಿಗಳೂ ನಾರದರು ಮೊದಲಾದ ದೇವರ್ಷಿಗಳೂ ಎಲ್ಲರೂ ಬಂದರು. ಮೇಘಮಂಡಲದಲ್ಲಿ ಸೇರಿದ ಆ ಸಭೆಯು ಆಕಾಶದಲ್ಲಿ ಉದಿಸಿದ ನೂರಾರು ಸೂರ್ಯರಂತೆ ಕಂಗೊಳಿಸಿತು.

ಸಭೆಯಲ್ಲಿ ಆಗ ಒಬ್ಬ ಶೂದ್ರರಾಜನನ್ನು ಬ್ರಾಹ್ಮಣಪದವಿಗೇರಿಸಬೇಕಾಯಿತು. ಹೇಗೆಂದರೆ ವಿಶ್ವಾಮಿತ್ರರಿಗೆ ಪ್ರಕಟವಾದ ಮಹಾಮಂತ್ರಕ್ಕೆ '**ಗಾಯತ್ರಿ**'ಎಂದು ಹೆಸರು. ಅಂದಿನಿಂದ ಆ ಮಂತ್ರವು ಬ್ರಾಹ್ಮಣರ ಪ್ರಾರ್ಥನಾಮಂತ್ರಗಳಲ್ಲಿ ಬಹುಶ್ರೇಷ್ಠವಾದದ್ದಾಯಿತು. ಆದರೆ ವಿಶ್ವಾಮಿತ್ರರನ್ನು ಬ್ರಾಹ್ಮಣಪದವಿಗೆ ಸೇರಿಸಬೇಕೆಂದು ಬ್ರಹ್ಮನು ಅಭಿಪ್ರಾಯಪಟ್ಟಾಗ ಬ್ರಹ್ಮರ್ಷಿಗಳಲ್ಲಾಗಲಿ ದೇವರ್ಷಿಗಳಲ್ಲಾಗಲಿ ಯಾರೂ ಒಪ್ಪಲಿಲ್ಲ. ವಿಶ್ವಾಮಿತ್ರರು ಈಗಾಗಲೆ ಬಹುಮಟ್ಟಿಗೆ ಪ್ರಪಂಚವನ್ನೆಲ್ಲ ಆಕ್ರಮಿಸಿಕೊಂಡಿರುವರೆಂದೂ ಬ್ರಾಹ್ಮಣರ ಪದವಿಯೂ ಬ್ರಾಹ್ಮಣರ ಜ್ಞಾನವೂ ಅವರಿಗೆ ದಕ್ಕಿದರೆ ಒಡನೆಯೆ ಅವರು ಸೃಷ್ಟಿಯನ್ನೇ ನಿರ್ನಾಮವಾಗಿ ಮಾಡದೆ ಬಿಡರೆಂದೂ ಕೆಲವರು ಹೇಳಿದರು. ಅವರ ಮಹತ್ವಾಕಾಂಕ್ಷೆಯು ಮಿತಿಮೀರಿದ್ದೆಂದೂ ಈ ದಿನ ಅವರು ಬ್ರಾಹ್ಮಣಪದವಿಯ ಗೌರವವನ್ನು ಪಡೆದರೆ ನಾಳೆ ತಾವು ಬ್ರಹ್ಮನೇ ಆಗಬೇಕೆಂದು ಕೇಳಬಹುದೆಂದೂ ಈ ಕಾರಣಗಳಿಂದ ಅವರಿಗೆ ಪ್ರೋತ್ಸಾಹವನ್ನು ಕೊಡುವದು ಅವಿವೇಕವೆಂದೂ ಇನ್ನು ಕೆಲವರು ಹೇಳಿದರು.

ಕೊನೆಗೆ ಅಲ್ಲಿ ಸೇರಿದ್ದ ಋಷಿಗಳೆಲ್ಲರೂ ಕೂಡಿ ಬ್ರಾಹ್ಮಣಪದವಿಯೊಂದು ಹೊರತು ಇನ್ನೇನು ಕೇಳಿದರೂ ಕೊಡುವದಕ್ಕಾಗಿ ತಮ್ಮ

ಪರವಾಗಿ ಬ್ರಹ್ಮನನ್ನು ಕಳುಹಿಸಬೇಕೆಂದು ನಿಶ್ಚಯಿಸಿದರು. ದೇವ ದೇವನಾದ ಬ್ರಹ್ಮನು ಸೂರ್ಯಕಿರಣಗಳಿಂದ ರಚಿತವಾದ ವಿಮಾನ ವನ್ನು ಹತ್ತಿ ಸೂರ್ಯನೇ ಹಿಮಾಲಯದ ಗುಹಾಪ್ರದೇಶಕ್ಕೆ ಬಂದಂತೆ ನುತ್ತಲೂ ಅತ್ಯಧಿಕವಾದ ಪ್ರಕಾಶವನ್ನು ಬೀರುತ್ತ ಬಂದು ವಿಶ್ವಾ ಮಿತ್ರರನ್ನು ಧ್ಯಾನದಿಂದ ವಿಮುಖರನ್ನಾಗಿ ಮಾಡಿ—"ನಾನು ಬ್ರಹ್ಮನು; ನಿನ್ನ ತಪಶ್ಚರ್ಯಕ್ಕೆ ಮೆಚ್ಚಿದ್ದೇನೆ. ನೀನು ಕೇಳಿದ್ದನ್ನು ಕೊಡುವದಕ್ಕೆ ನಾನು ಬಂದಿದ್ದೇನೆ. ಕೊಡುವದಕ್ಕೆ ಸಾಧ್ಯವಾದದ್ದನ್ನು ನೀನು ಏನು ಕೇಳಿದರೂ ನಾನು ಅದನ್ನು ಕೊಡುತ್ತೇನೆ."—ಎಂದು ಹೇಳಿದನು.

**ವಿಶ್ವಾಮಿತ್ರರು**:—ನನಗೆ ಬ್ರಾಹ್ಮಣಪದವಿ ಬೇಕು. ನೀನು ಅದನ್ನು ನನಗೆ ಕೊಡಬಲ್ಲೆಯ?

**ಬ್ರಹ್ಮ**:—ಅದಾಗದು.

**ವಿಶ್ವಾಮಿತ್ರರು**:—ಹಾಗಾದರೆ ನಿನ್ನಂಥ ಬ್ರಹ್ಮನಿಂದ ನನ ಗೇನೂ ಆಗಬೇಕಾದ್ದಿಲ್ಲ.

ಈ ಮಾತನ್ನು ಕೇಳಿ ಬ್ರಹ್ಮನ ಮನಸ್ಸಿಗೆ ಸ್ವಲ್ಪ ಸಂಕೋಚವಾ ಯಿತು. ಏನು ಮಾಡುವದು! ಸೂರ್ಯಕಿರಣಗಳ ವಿಮಾನವನ್ನು ಹತ್ತಿ ಬ್ರಹ್ಮರ್ಷಿಗಳ ಸಭೆಗೆ ಹಿಂದಿರುಗಿ ಹೋಗಿ—"ವಿಶ್ವಾಮಿತ್ರರನ್ನು ಸಮಾಧಾನಗೊಳಿಸಬೇಕಾದರೆ ಅವರನ್ನು ಬ್ರಾಹ್ಮಣರನ್ನಾಗಿಯೇ ಮಾಡಬೇಕಾಗುವದು"—ಎಂದು ಅವರಿಗೆ ಹೇಳಿದನು. ಆದರೂ ಅದಕ್ಕೆ ಯಾರೂ ಒಪ್ಪಲಿಲ್ಲ. ಅವರವರೇ ಆಮೇಲೆ ಆಲೋಚಿಸಿ, ವಿಶ್ವಾಮಿತ್ರರ ಬಳಿಗೆ ಹೋಗಿ ಅವರು ಇನ್ನೇನಾದರೂ ಕೇಳುವಂತೆ ಮಾಡಬೇಕೆಂದು ಗೊತ್ತುಮಾಡಿಕೊಂಡರು. ಅವರ ಜೊತೆಯಲ್ಲಿ ಹೊರಡಲು ವಸಿಷ್ಠರಿಗೆ ಮೊದಲು ಮನಸ್ಸು ಬರಲಿಲ್ಲ. ಬ್ರಹ್ಮನೂ ಮತ್ತು ಉಳಿದ ಸಭಾಸದರೂ ಬಹಳವಾಗಿ ಕೇಳಿಕೊಂಡದ್ದರ ಮೇಲೆ ಅವರೂ ಹೊರಟರು. ತೇಜಶ್ಶರೀರಿಗಳಾದ ಋಷಿಗಳು ಕೆಲವರು ಸೂರ್ಯಕಿರಣಗಳ ಗತಿಯನ್ನೂ ಕೆಲವರು ವಾಯುಗತಿಯನ್ನೂ ಹೀಗೆ ಅಮಾನುಷಗತಿಯನ್ನು ಹಿಡಿದು ಬಂದರು. ಇನ್ನು ಕೆಲವರು ಮನೋ ವೇಗದಿಂದಲೇ ಬಂದರು. ಬ್ರಹ್ಮನು ಮೊದಲು ಮಾಡಿದಂತೆ ವಿಶ್ವಾ ಮಿತ್ರರನ್ನು ಧ್ಯಾನದಿಂದ ತಿರುಗಿಸಿದನು.

ತಪ್ಪ ಮೇಲಣ ಕಸಿಕರದಿಂದ ಬಂದ ಋುಷಿಮಂಡಲದ ಮಧ್ಯ ದಲ್ಲಿ ವಸಿಷ್ಠರನ್ನು ಕಂಡಾಗ ವಿಶ್ವಾಮಿತ್ರರಿಗೆ ಮೈಯೆಲ್ಲ ಉರಿಹತ್ತಿತು. ಬಹುಕಾಲ ಅವರು ಉಸಿರೆತ್ತದೆ ಇದ್ದರು. ಋುಷಿಗಳಲ್ಲಿ ಕುಶಲನಾದ ಒಬ್ಬನು ವಿಶ್ವಾಮಿತ್ರರಿಗೆ ಸಮಾಧಾನಕರವಾದ ಮಾತುಗಳನ್ನಾಡು ವದಕ್ಕೆ ಉಪಕ್ರಮಿಸಿ-'ಬ್ರಾಹ್ಮಣಿಕೆಯೆಂಬುದೊಂದು ಕ್ಷುದ್ರವಿಷಯ. ನೀನು ಮಹನೀಯನಾಗಿಯೂ ಪರಾಕ್ರಮಿಯಾಗಿಯೂ ಉಗ್ರತಪಸ್ವಿ ಯಾಗಿಯೂ ಇರುವದರಿಂದ ಬ್ರಾಹ್ಮಣರಿಗೆ ಕಿರೀಟಪ್ರಾಯನಾಗಿಯೇ ಇರುತ್ತಿ. ನಿನ್ನಮಂತ್ರವನ್ನೇ ಬ್ರಾಹ್ಮಣರು ಪುರಶ್ಚರಣೆ ಮಾಡಬೇಕಾ ಗಿರುವಾಗ ಬ್ರಾಹ್ಮಣರ ಪದವಿಯನ್ನು ಪಡೆಯುವದಕ್ಕೆ ನೀನಗೇನು ಸಾಲದು? ಬ್ರಾಹ್ಮಣಪದವಿಯಲ್ಲಿ ಅನೇಕಕಷ್ಟಗಳು ತುಂಬಿವೆ. ಅವರು ಅನುಸರಿಸಬೇಕಾದ ನಿಯಮಗಳಿಗೆ ನೆಲೆಯೇ ಇಲ್ಲ. ನೀನು ರಾಜ. ನಿನಗೆ ಅದೊಂದು ದೊಡ್ಡ ಪೇಚಾಟವಾಗುವದು'—ಎಂದು ಹೇಳಿದನು.

**ವಿಶ್ವಾಮಿತ್ರರು**:-ಎಡೆಬಿಡದೆ ಈ ಕಠಿನವಾದ ತಪಶ್ಚರ್ಯವನ್ನು ಮಾಡಬಲ್ಲ ನನಗೆ ಬ್ರಾಹ್ಮಣರ ವ್ರತಗಳೂ ನಿಯಮಗಳೂ ಅಸಾಧ್ಯವೆ?

**ಋುಷಿ**:—ನಿನ್ನಿಂದಾಗದೆಂದು ನಾವು ಹೇಳೆವು. ಆದರೆ ಈ ಕಷ್ಟ ನಿಷ್ಠುರಗಳನ್ನು ಕಟ್ಟಿಕೊಳ್ಳುವದರಿಂದ ನಿನಗಾಗುವದೇನು? ಇಂದ್ರನ ಪದವಿಯನ್ನು ಪಡೆಯುವದಕ್ಕೆ ಏಕೆ ಪ್ರಯತ್ನಪಡಬಾರದು? ಆ ಪದವಿ ನಿನಗೆ ಚೆನ್ನಾಗಿ ಒಪ್ಪುವದು. ನಿನ್ನ ತಪಶ್ಚರ್ಯಕ್ಕೆ ನಾವೆಲ್ಲರೂ ಮೆಚ್ಚಿ ದ್ದೇವೆ. ನಿನಗೆ '**ರಾಜರ್ಷಿ**'ಎಂಬ ಬಿರುದನ್ನು ಕೊಡುತ್ತೇವೆ. ರಾಜರ್ಷಿ ಗಳು ದೇವರ್ಷಿಗಳಿಗೆ ಕೇವಲ ಎರಡನೆಯವರೆಂದು ನಿನಗೆ ಚೆನ್ನಾಗಿ ಗೊತ್ತೇ ಇದೆ. ನಾವು ನಿನ್ನನ್ನು ಈ ತರಗತಿಯ ಋುಷಿಯನ್ನಾಗಿ ಮಾಡುತ್ತೇವೆ. ನಿನಗೆ ಬ್ರಾಹ್ಮಣನಾಗಬೇಕೆಂಬ ಬಯಕೆ ಇನ್ನೇಕೆ? ಇಗೋ '**ರಾಜರ್ಷಿ**' ಎಂಬ ಬಿರುದನ್ನು ತೆಗೆದುಕೊ.

ವಿಶ್ವಾಮಿತ್ರರು ಈ ಮಾತುಗಳಲ್ಲಿದ್ದ ಕುಯುಕ್ತಿಯನ್ನು ಕಂಡು ಹಿಡಿದುಕೊಂಡರು. ಬ್ರಾಹ್ಮಣರು ತಮ್ಮ ತಪಶ್ಚರ್ಯಕ್ಕೆ ಹೆದರಿದ್ದಾ ರೆಂದು ಒಡನೆಯೇ ಅವರಿಗೆ ಗೊತ್ತಾಯಿತು. ಆಗ ಅವರು ಆ ಬಿರುದಿನ ಬಿಲ್ಲೆಯನ್ನು ಒಂದು ಕಡೆಗೆ ಒಗೆದು ಅವರನ್ನು ಕುರಿತು—''ಬ್ರಹ್ಮರ್ಷಿ ಗಳೇ! ನಿಮ್ಮ ಕುಯುಕ್ತಿ ನನಗೆ ತಿಳಿಯಿತು. ನೀವು ಒಳ್ಳೆಯ ಛಿ

ಮಾತಿನಿಂದ ನನ್ನನ್ನು ಬ್ರಾಹ್ಮಣಪದವಿಯಿಂದ ಹೊರಗೆ ಇಡಬೇಕೆಂದು ಮಾಡುತ್ತಿರುವ ಯತ್ನವು ನನಗೆ ಕಂಡಿತು. ನಾನು ಇನ್ನು ಅದನ್ನು ನಿಮ್ಮಿಂದ ಅಪೇಕ್ಷಿಸುವದಿಲ್ಲ. ನಾನು ಬ್ರಹ್ಮನೇ ಆಗಬೇಕೆಂದು ಬಯಸುತ್ತೇನೆ. ಅದಕ್ಕಾಗಿ ನಾನು ನಿಮ್ಮನ್ನು ಮುಖಸ್ತುತಿಮಾಡಿ ಬೇಡುವವನಲ್ಲ. ನಾನೊಂದು ಹೊಸಪ್ರಪಂಚವನ್ನು ಸೃಷ್ಟಿಮಾಡಿ ಅದರ ಬ್ರಹ್ಮನಾಗುತ್ತೇನೆ. ನನ್ನ ಪ್ರಪಂಚದಲ್ಲಿ ದುಃಖವನ್ನೇ ಇರಗೊಡುವದಿಲ್ಲ. ಬ್ರಾಹ್ಮಣರು ಅದರ ಹತ್ತಿರಕ್ಕೆ ಬರಕೂಡದು. ನಿಮ್ಮ ಕೈಲಾದರೆ ತಡೆಮಾಡಿರಿ; ನೋಡೋಣ.''—ಎಂದು ಹೇಳಿದರು.

ವಸಿಷ್ಠರು ಕೈಸನ್ನೆಮಾಡಿ ಬ್ರಹ್ಮನನ್ನು ಕುರಿತು—''ಇದನ್ನು ನಾನು ಮೊದಲೇ ಹೇಳಲಿಲ್ಲವೆ? ಅವನಿನ್ನೂ ಬ್ರಾಹ್ಮಣನಾಗದಿದ್ದರೂ ಕೂಡ ಇಷ್ಟು ಸೊಕ್ಕಿದ್ದಾನೆ!''—ಎಂದು ಹೇಳಿದರು. ಇನ್ನೂ ಒಂದುಸಲ ಪ್ರಯತ್ನವನ್ನು ಮಾಡಿ ಅವರನ್ನು ದಾರಿಗೆ ತರಬೇಕೆಂದು ಋಷಿಗಳು ಅವರನ್ನು ಕುರಿತು-''ನೀನು ಮನಸ್ಸು ಮಾಡಿದರೆ ಒಂದು ಹೊಸ ಪ್ರಪಂಚವನ್ನು ಸೃಷ್ಟಿಮಾಡುವದೇನೂ ಆಶ್ಚರ್ಯವಲ್ಲ. ತಪಶ್ಚರ್ಯೆಯಿಂದ ಬ್ರಹ್ಮಾಂಡವನ್ನೇ ಅಲ್ಲೋಲಕಲ್ಲೋಲಮಾಡಿದವನಿಗೆ ಸೃಷ್ಟಿಕಾರ್ಯವೆಂಬುದೇನೂ ದೊಡ್ಡದಲ್ಲ. ನಾವು ನಿನ್ನಸ್ನೇಹಿತರು; ನಿನಗೆ ಹಿತವಾಗಲೆಂದು ಹೇಳುತ್ತಿದ್ದೇವೆ; ನೀನು ಸುಮ್ಮನೆ ಆ ಕಷ್ಟವನ್ನೇಕೆ ಮೈಮೇಲೆ ಹಾಕಿಕೊಳ್ಳುತ್ತಿ? ಈ ಲೋಕದಲ್ಲಿ ಯಾರೂ ನಿನಗೆ ಈಡಲ್ಲ. ನೀನು ಬ್ರಾಹ್ಮಣರಿಗಿಂತಲೂ ಮತ್ತು ಬ್ರಹ್ಮನಿಗಿಂತಲೂ ಹೆಚ್ಚಿನವನು. ಹೊಸ ಪ್ರಪಂಚವನ್ನು ಸೃಷ್ಟಿಮಾಡಬೇಕೆಂಬ ಬಯಕೆಯಿಂದ ಏನು ಪ್ರಯೋಜನ?''ಎಂದು ಹೇಳಿದರು. ಆಗ ವಿಶ್ವಾಮಿತ್ರರು-''ಹಾಗಾದರೆ ಭೂಮಂಡಲದಲ್ಲಿ ಬ್ರಾಹ್ಮಣರೇ ಇಲ್ಲದಂತೆ ಮಾಡಿ ಆಮೇಲೆ ನಾನು ನಿಮ್ಮ ಪ್ರಪಂಚದಲ್ಲಿರುವೆನು. ಬ್ರಾಹ್ಮಣರನ್ನು ನನ್ನ ಕಣ್ಣುಗಳು ನೋಡಲಾರವು''—ಎಂದು ಹೇಳಿದರು. ಆಮೇಲೆ ಬ್ರಹ್ಮನಿಗೂ ಮತ್ತು ಎಲ್ಲರಿಗೂ ಮಹತ್ತರವಾದ ಸಿಟ್ಟು ಬರಲು ಎಲ್ಲರೂ ತಟಕ್ಕನೆ ಎದ್ದುಹೋದರು. ಹೊಸಪ್ರಪಂಚವನ್ನು ಸೃಷ್ಟಿಮಾಡುವದಕ್ಕೆ ತಕ್ಕ ಪ್ರದೇಶವಾವುದೆಂಬುದನ್ನು ನೋಡುವದಕ್ಕಾಗಿ ವಿಶ್ವಾಮಿತ್ರರು ಧವಲಗಿರಿಯ ಅತ್ಯುನ್ನತಶಿಖರದ ಕಡೆಗೆ ಹತ್ತಿದರು.



# ನಾಲ್ಕನೆ ಸನ್ನಾಹ

## ಸೃಷ್ಟಿಯ ಉಪಕರಣ

ನಿರ್ಮಲವಾಗಿ ಕಾಣುವ ಶರತ್ಕಾಲದ ಆಕಾಶದಲ್ಲಿ ಅಸಂಖ್ಯಾಕವಾದ ನಕ್ಷತ್ರಗುಚ್ಛಗಳ ನಡುವೆ ಮಂದವಾದ ಬಿಳುಪುಬಣ್ಣದ ಮಂಜಿನ ಹಾಗಿರುವ ಕೆಲವು ವಸ್ತುಗಳು ಆಗಾಗ ತೋರುವವು. ದೂರದರ್ಶಕದರ್ಪಣದಿಂದ ನೋಡಿದರೆ ಅವು ಸ್ಪಷ್ಟವಾಗಿ ಕಾಣುವವು. ಅವು ನಿಜವಾಗಿ ಸೃಷ್ಟಿಕಾರ್ಯಕ್ಕಾಗಿ ಕೂಡಿಹಾಕಿದ ವಸ್ತುಗಳಲ್ಲದೆ ಮತ್ತೇನೂ ಅಲ್ಲ. ಅವುಗಳಿಂದ ಭೂಮಂಡಲವಾಗಲಿ, ಸೂರ್ಯಮಂಡಲವಾಗಲಿ ಇನ್ನೂ ಆಗಿಲ್ಲ.

ವಿಶ್ವಾಮಿತ್ರರು ಬ್ರಹ್ಮನೊಡನೆಯೂ ಋಷಿಗಳೊಡನೆಯೂ ಜಗಳವಾಡಿ ಧವಲಗಿರಿಯ ಅತ್ಯುನ್ನತಶಿಖರವನ್ನು ಹತ್ತಿದ ದಿವಸ ಮೊದಲು ಅವು ಅವರ ಕಣ್ಣಿಗೆ ಬಿದ್ದವು. ಒಡನೆಯೆ ಅವರು ಆಕಾಶ ಮಾರ್ಗದಿಂದ ಅವುಗಳ ಕಡೆಗೆ ನಡೆದರು. ಬಾಣದ ವೇಗದಂತೆಯೂ ಪ್ರವಾಹದ ವೇಗದಂತೆಯೂ ಮತ್ತು ವಿದ್ಯುಚ್ಛಕ್ತಿಯ ವೇಗದಂತೆಯೂ ಆ ರಾಜರ್ಷಿವರ್ಯರು ಆಕಾಶಮಾರ್ಗದಲ್ಲಿ ಪ್ರತಿಕ್ಷಣದಲ್ಲಿಯೂ ಲಕ್ಷಾಂತರ ಮೈಲಿಗಳನ್ನು ದಾಟಿಹೋಗುತ್ತಿದ್ದರು. ಅವರ ಕಾಂತಿಯು ಪುಟಕ್ಕೆ ಹಾಕಿದ ಚಿನ್ನದಂತಿತ್ತು. ತಿರಿ ಹೊಸೆದಿದ್ದ ಅವರ ಜಡೆಗಳು ಅವರ ಹಿಂಗಾಲುಗಳಿಗೆ ತಾಕುತ್ತ ಜೋಲಾಡುತ್ತ ಬಿಸಿಲಿನಿಂದ ಝಗಝಗಾಯಮಾನವಾಗಿ ಹೊಳೆಯುತ್ತಿದ್ದವು. ಹಗಲುಹೊತ್ತಿನಲ್ಲಿ ಅಪೂರ್ವವಾದ ಈ ಅದ್ಭುತವನ್ನು ನೋಡಿ ಭೂಮಿಯ ಮೇಲಣ ಜನರು ಅದೊಂದು ಬಾಲಚುಕ್ಕೆಯೆಂದೂಹಿಸಿದರು.

ಆಮೇಲೆ ರಾತ್ರಿಯಾಗಲು ವಸಿಷ್ಠರು ಏಕಾಂತವಾಗಿ ತಮ್ಮ ಪರ್ಣಶಾಲೆಯಲ್ಲಿ ಭಗವಚ್ಚಿಂತನಕ್ಕೆ ಹೋಗಬೇಕೆಂದು ಯತ್ನವನ್ನು

ಮಾಡುವಾಗ ಆಕಾಶದಲ್ಲಿ ಒಮ್ಮೆಗೇ ಒಂದು ಧೂಮಕೇತು ಅವರಿಗೆ ಕಂಡಿತು. ಅದರಿಂದ ಮುಂದೆ ಏನೋ ಕೇಡಾಗುವದೆಂಬ ಸಂಶಯದಿಂದ ಅವರ ಎದೆ ನಡುಗಿತು. ಮಹತ್ತರವಾದ ಯುದ್ಧಗಳಲ್ಲಿ ಕಂದದೆ ಮಹರ್ಷಿಗಳ ಸಭೆಯಲ್ಲಿ ಕುಂದದೆ ಇದ್ದ ಅವರ ಹೃದಯವು ನಿಷ್ಕಾರಣವಾಗಿ ಭಯದಿಂದ ನಡುಗಿತು.

ವಿಶ್ವಾಮಿತ್ರರು ಕೆಳಗಣ ವಾತಾವರಣವನ್ನು ದಾಟಿ ಹೋಗುತ್ತ ಹೋಗುತ್ತ ಮಂಗಲ ಮತ್ತು ಬೃಹಸ್ಪತಿ ಮುಂತಾದ ಗ್ರಹಮಂಡಲಗಳನ್ನು ದಾಟಿ ಇನ್ನೊಂದು ಸೌರವ್ಯೂಹಕ್ಕೆ ಹೋದರು. ಅಲ್ಲಿಂದ ಮುಂದೆ ಅವರು ಅದರ ಗ್ರಹೋಪಗ್ರಹಗಳನ್ನೆಲ್ಲ ದಾಟಿ ಮೂರನೆ ಸೌರವ್ಯೂಹಕ್ಕೆ ಹೋಗಿ ಹೀಗೆಯೇ ಲೆಕ್ಕವಿಲ್ಲದಷ್ಟು ಸೌರವ್ಯೂಹಗಳನ್ನು ಕಳೆದು ಯುಕ್ತಿಯಿಂದ ತಿಳಿಯುವದಕ್ಕಾಗಲಿ ಮನಸ್ಸಿನಿಂದ ಊಹಿಸುವದಕ್ಕಾಗಲಿ ಆಗದ ಅಪಾರವಾದ ಶೂನ್ಯಪ್ರದೇಶಕ್ಕೆ ಸೇರಿದರು. ಅಲ್ಲಿ ಗಾಳಿಯೂ ಇಲ್ಲ; ಶಬ್ದವೂ ಇಲ್ಲ; ಏನೂ ಇಲ್ಲ. ಅದಕ್ಕೆ ಕೊನೆ ಇಲ್ಲ; ಮೊದಲಿಲ್ಲ; ದಟ್ಟವಾದ ಮಬ್ಬು. ಅದು ದುರ್ಗಮವಾದ, ಭಯಂಕರವಾದ, ಅಪಾರವಾದ, ರೂಪರಹಿತವಾದ, ಸಮುದ್ರದಂತೆ ಇತ್ತು. ಗ್ರಹಮಂಡಲಗಳು ಎಷ್ಟುಮಾತ್ರವೂ ಕಣ್ಣಿಗೆ ಕಾಣದಷ್ಟು ಹಿಂದುಳಿದಿದ್ದವು. ಬೆಳಕು ಕೂಡ ಮಂದವಾಗಿತ್ತು. ಅವರನ್ನು ಅಷ್ಟು ಮುಂದಕ್ಕೆ ತೆಗೆದುಕೊಂಡು ಹೋದದ್ದು ಅವರ ಅಮಾನುಷವಾದ ಯೋಗಶಕ್ತಿಯಲ್ಲದೆ ಬೇರೆಯಲ್ಲ. ಊಹೆಗೂ ಕೂಡ ನಿಲುಕದ ಈ ಭಯಂಕರವಾದ ಸ್ಥಲದಲ್ಲಿ ಅವರು ಎಂದೂ ಎಳ್ಳಷ್ಟೂ ಹೆದರಲಿಲ್ಲ. ಈ ಅಪಾರವಾದ ಶೂನ್ಯಪ್ರದೇಶದಲ್ಲಿ ಬಹುದೂರ ಹೋದ ಮೇಲೆ ಒಂದಾನೊಂದು ಪರೋಕ್ಷವಾದ ಕೇಂದ್ರದ ಸುತ್ತಲೂ ಅಪಾರವಾದ, ಅಗಾಧವಾದ, ಅಸಂಖ್ಯಾಕವಾದ, ಅಣುಗುಚ್ಛಗಳು ನಿರಂತರವಾಗಿ ಸುತ್ತುತ್ತಿರುವ ಹಾಗೆ ಅವರಿಗೆ ಕಂಡಿತು. ಅವರು ತಾವು ಹುಡುಕಿಕೊಂಡು ಬಂದದ್ದು ಅದಕ್ಕೇ ಆಗಿ ತೋರಿದ್ದರಿಂದ ಅದರ ಸಮೀಪದಲ್ಲಿಯೇ ನಿಂತರು.

—◦—

## ಹೊಸ ಸೂರ್ಯ

ಈ ಅಪಾರವಾದ ಶೂನ್ಯಪ್ರದೇಶದಲ್ಲಿ ಇಂಥ ವಸ್ತುಗಳು ಕೋಟ್ಯಂತರ ಇರುವವೆಂದು ವಿಶ್ವಾಮಿತ್ರರು ಧ್ಯಾನಬಲದಿಂದ ಕಂಡು ಹಿಡಿದರು. ಮತ್ತು ತಮ್ಮ ಅಮಾನುಷಶಕ್ತಿಯಿಂದ ಅವುಗಳನ್ನೆಲ್ಲ ಆಕರ್ಷಿಸುವದಕ್ಕೆ ಮೊದಲುಮಾಡಿದರು. ಎಷ್ಟು ಅಸಂಖ್ಯಾಕನಕ್ಷತ್ರಗಳನ್ನೂ ಗ್ರಹಗಳನ್ನೂ ಆ ನಿರಾಕಾರವಸ್ತುಸಂಘದ ಕಡೆಗೆ ಎಳೆದರೊ ಯಾರಿಗೂ ತಿಳಿಯದು. ಆ ಮಂದವಾದ ಬೆಳಕಿನಲ್ಲಿ ವಿಶ್ವಾಮಿತ್ರರು ದೃಷ್ಟಿಯನ್ನು ಪ್ರಸರಿಸಿದರು. ಆ ವಸ್ತುಗಳ ಪರಸ್ಪರ ಸಂಘರ್ಷಣದಿಂದ ಭಯಂಕರವಾದ, ಅದ್ಭುತವಾದ ಆಕಾರವುಳ್ಳ ಜಲಜಂತುಗಳು ಆ ಪಾರದರ್ಶಕಪ್ರದೇಶಕ್ಕೆ ನುಗ್ಗಿ ಬಂದು ಸುರಕ್ಷಿತವಾಗಿ ನಿಲ್ಲುತ್ತಿದ್ದ ಹಾಗೆ ಕಾಣಬಂತು ಅಥವಾ ಒಂದಕ್ಕೊಂದಿದಿರಾಗಿ ಬರುವ ಗಾಳಿಗಳ ದೆಸೆಯಿಂದ ಕಾಲಮೇಘಗಳ ದೊಡ್ಡ ದೊಡ್ಡ ತುಂಡುಗಳು ಬಂದು ಗುಂಪುಕೂಡಿದ ಹಾಗೂ ತೋರಿತು.

ತಮಗೆ ಸಾಕಾಗುವಷ್ಟು ಆ ವಸ್ತುಗಳು ಬಂದು ಕೂಡಿದ ಮೇಲೆ ಅವರು ತಮ್ಮ ಅಮಾನುಷಶಕ್ತಿಯಿಂದ ಅವುಗಳನ್ನೆಲ್ಲ ಒಂದು ಕಡೆಗೆ ತಂದು ಒಂದರಿಂದೊಂದು ತಿರುಗುವಂತೆ ಮಾಡಿದರು. ಪ್ರತಿಯೊಂದುವಸ್ತುವೂ ತನ್ನತನ್ನ ಕೇಂದ್ರದ ಸುತ್ತಲೂ ತಿರುಗಿತು. ಕ್ಷಣಕ್ಷಣವೂ ಆ ತಿರುಗಾಟದ ವೇಗವು ಹೆಚ್ಚುತ್ತ ಬರಬರುತ್ತ ಒಂದು ಕ್ಷಣಕ್ಕೆ ಸಾವಿರ, ಲಕ್ಷ, ಕೋಟಿ, ಅರ್ಬುದ ಮೈಲುಗಳಷ್ಟಾಗುತ್ತ ಬಂತು. ಅವು ಎಷ್ಟೆಷ್ಟು ವೇಗದಿಂದ ಸುತ್ತುತ್ತ ಬಂದವೊ ಅಣುಗಳು ಅಷ್ಟಷ್ಟು ಹತ್ತಿರಕ್ಕೆ ಹೊಂದಿಕೊಳ್ಳುತ್ತ ಬಂದು ಹೆಚ್ಚು ಹೆಚ್ಚು ದಟ್ಟವಾದವು. ಹೆಚ್ಚು ಹೆಚ್ಚು ದಟ್ಟವಾಗುತ್ತ ಬಂದ ಹಾಗೆಲ್ಲ ಉಷ್ಣವು ಹೆಚ್ಚುತ್ತ ಬಂದು ದೊಡ್ಡ ದೊಡ್ಡ ತುಂಡುಗಳೆಲ್ಲ ಕಾವಿನಿಂದ ನಿಗಿನಿಗಿ ಹೊಳೆಯುತ್ತ ಕಾಣುವದಕ್ಕಾರಂಭಿಸಿದವು. ಕೋಟ್ಯಂತರ ಮೈಲುಗಳ ದೂರದಲ್ಲಿದ್ದ ನಕ್ಷತ್ರಗಳು ಸಂಪೂರ್ಣವಾಗಿ ಕಾಣದಂತಾದವು. ಆ ಹೊಸ ಪ್ರಪಂಚದ ಕತ್ತಲೆಯನ್ನು ನೂಕುತ್ತ, ದಟ್ಟವಾದ ಮಂಜಿ

ನಲ್ಲಿ ನುಗ್ಗಿ, ಚಿರಕಾಲ ಕತ್ತಲೆಯಲ್ಲಡಗಿದ್ದ ಅಪಾರವಾದ ಶೂನ್ಯ ಪ್ರದೇಶಕ್ಕೆ ಬೆಳಕು ಕೊಟ್ಟು, ಎಲ್ಲೆಲ್ಲಿಯೂ ಹರಡಿಕೊಳ್ಳುತ್ತ ಒಂದು ಹೊಸ ಬೆಳಕು ಅತಿದೂರಪ್ರದೇಶವನ್ನು ವ್ಯಾಪಿಸಿ ಆ ನವೀನಪ್ರಪಂಚದ ಸೃಷ್ಟಿಯ ಸುದ್ದಿಯನ್ನು ವಸಿಷ್ಠರ ಕಡೆಗೆ ತರುತ್ತಿರುವದೆಂಬಂತೆ ನಿಮಿಷಕ್ಕೆ ಹನ್ನೆರಡು ಕೋಟಿ ಮೈಲಿಗಳಂತೆ ಮುಂದೆ ಹರಿಯಿತು. ವಿಶ್ವಾಮಿತ್ರರು ಇದನ್ನು ನೋಡಿದರು. ಬೆಳಕು ಚೆನ್ನಾಗಿತ್ತು. ತನ್ನ ಹೊಸ ಸೌರವ್ಯೂಹದ ಸೂರ್ಯನೂ ಚೆನ್ನಾಗಿ ಆಗಿದ್ದನು. ಅದರ ತಾಪವು ಲಕ್ಷಾಂತರ ಶತಮಾನಗಳು ಕಳೆದರೂ ಆರುವ ಹಾಗಿರಲಿಲ್ಲ.

## ಹೊಸ ಸೃಷ್ಟಿ

ಅದು ಸ್ವಲ್ಪ ಹೊತ್ತು ಪ್ರಕಾಶಿಸುತ್ತಿದ್ದ ಮೇಲೆ—''ಬುಧಗ್ರಹವಾಗಲಿ''—ಎಂದು ವಿಶ್ವಾಮಿತ್ರರು ಹೇಳಿದರು. ಆಗ ಹೊಳೆಯುತ್ತ ಸುತ್ತುತ್ತಿದ್ದ ಆ ಸಮುದಾಯದ ಒಂದು ಚೂರು ಕೆಲವು ದೂರಕ್ಕೆ ಹಾರಿ ತನ್ನ ಸುತ್ತಲೂ ತಾನು ತಿರುಗುವದಕ್ಕೆ ಮೊದಲುಮಾಡಿತು. ಕ್ರಮಕ್ರಮವಾಗಿ ಅದೊಂದು ನೆಲೆಗೆ ನಿಂತು ಬುಧಗ್ರಹವಾಯಿತು. ವಿಶ್ವಾಮಿತ್ರರಿಗೆ ಬುಧಗ್ರಹವೂ ಚೆನ್ನಾಗಿ ಕಂಡಿತು. ಆಮೇಲೆ ಅವರು–''ಶುಕ್ರಗ್ರಹವಾಗಲಿ''–ಎಂದರು. ಪ್ರಕಾಶಮಾನವಾದ ಆ ವಸ್ತುವಿನ ಇನ್ನೊಂದು ತುಂಡು ಕೆಲವು ದೂರಕ್ಕೆ ಹಾರಿ ಸುತ್ತಲೂ ಸುತ್ತುವದಕ್ಕಾರಂಭಿಸಿತು. ಹೀಗೆ ಶುಕ್ರಗ್ರಹವೂ ಚೆನ್ನಾಗಿ ಆಯಿತು. ಆಗ ಅವರು–''ಭೂಗ್ರಹವಾಗಲಿ''–ಎಂದರು. ಇನ್ನೊಂದು ತುಂಡು ಹಾರಿ ಹೋಗಿ ಬೆಟ್ಟಗಳು, ಪರ್ವತಗಳು, ನದಿಗಳು, ಹಳ್ಳಗಳು, ದ್ವೀಪಗಳು ಮತ್ತು ಸಮುದ್ರಗಳು—ಇವುಗಳಿಂದ ಕೂಡಿ ಭೂಮಿಯು ಸ್ವರೂಪವನ್ನು ಪಡೆಯಿತು. ವಿಶ್ವಾಮಿತ್ರರು ತಮ್ಮ ಈ ಹೊಸ ಭೂಗ್ರಹದ ಉತ್ತಮಪರಿಸ್ಥಿತಿಯನ್ನು ಹಳೇ ಭೂಗ್ರಹವು ಎಷ್ಟುಮಾತ್ರವೂ ಹೋಲಲಾರದೆಂದು ಯೋಚಿಸಿದರು. ಹೀಗೆ ಅವರು ವಿಸ್ತಾರವಾದ ಅಣುಸಮುದಾಯದಿಂದ ನೂರು ದಿನಗಳೊಳಗೆ ಸೂರ್ಯ, ಚಂದ್ರ, ಮಂಗಳ,

ಬೃಹಸ್ಪತಿ, ಮತ್ತು ಇತರ ಗ್ರಹಗಳು ಅಲ್ಲದೆ ಹಳೇ ಸೌರವ್ಯೂಹದಲ್ಲಿರುವ ಎಲ್ಲ ಬಗೆಯನ್ನೂ ಮಾಡಿದರು. ಆದರೆ ಅವರ ಸೂರ್ಯನೂ ಭೂಮಿಯೂ ನಮ್ಮ ಸೂರ್ಯನಿಗಿಂತಲೂ ಭೂಮಿಗಿಂತಲೂ ಲಕ್ಷಾಂತರ ಪಾಲು ದೊಡ್ಡವಾಗಿದ್ದವು. ನಮ್ಮ ಭೂಮಿಗೆ ವಿಶ್ವಾಮಿತ್ರರ ಸೃಷ್ಟಿಯು ಅತ್ಯಂತ ವಿಸ್ತಾರವಾದದ್ದಾಗಿ ಕಂಡಿತು.



## ಹೊಸ ಭೂಮಿ

ಈ ಹೊಸಭೂಮಿಯ ಮೇಲೆ ನೀರು, ಗಾಳಿ, ಮಂಜು, ಹುಲ್ಲು, ಮರಗಳು, ಕಾಡುಗಳು, ಬೆಟ್ಟಗಳು, ಹಳ್ಳಗಳು ಎಲ್ಲವೂ ಹಳೇಭೂಮಿಯ ಮೇಲೆ ಇದ್ದಂತೆಯೇ ಇದ್ದವು. ಆದರೆ ವಿಶ್ವಾಮಿತ್ರರ ಸೃಷ್ಟಿಯಲ್ಲಿ ಹೆಚ್ಚೇನೆಂದರೆ ತೆಂಗಿನಮರ. ಅದು ಬ್ರಹ್ಮನ ಸೃಷ್ಟಿಯಲ್ಲಿರಲಿಲ್ಲ. ಅವರ ಸೃಷ್ಟಿಯಲ್ಲಿ ಮಾಂಸಾಹಾರಿಗಳಾದ ಪ್ರಾಣಿಗಳಿರಲಿಲ್ಲ; ಬಗೆಬಗೆಯ ಬಣ್ಣದ ಗರಿಗಳುಳ್ಳ ಹಕ್ಕಿಗಳು ಅಸಂಖ್ಯಾಕವಾಗಿ ಕಣ್ಣಿಗೂ ಮನಸ್ಸಿಗೂ ಆನಂದವನ್ನುಂಟುಮಾಡುತ್ತಿದ್ದವು. ಎಲ್ಲ ಹೂಗಿಡಗಳೂ ಸುವಾಸನೆಯುಳ್ಳ ಹೂಗಳನ್ನು ಬಿಡುತ್ತಿದ್ದವು. ಅವುಗಳ ಎಲೆಗಳು ಮತ್ತು ಬುಡಗಳು ಕೂಡ ಮಧುರವಾಗಿಯೂ ಸುವಾಸನೆಯಾಗಿಯೂ ಇದ್ದವು. ಹೊಸಭೂಮಿಯ ಮೇಲ್ಮೈಯನ್ನು ಮುಸುಕಿಕೊಂಡಿದ್ದ ಹುಲ್ಲು ಅತ್ಯುತ್ತಮವಾಗಿ ಭಟ್ಟಿ ಇಳಿಸಿದ ಗುಲಾಬಿಯ ಅತ್ತರಿಗಿಂತ ಬಹು ಮೇಲಾದ ಸುವಾಸನೆಯನ್ನು ಕೊಡುತ್ತಿತ್ತು. ಆಕಾಶದಿಂದ ಬೀಳುತ್ತಿದ್ದ ಮಳೆಯ ನೀರೆಲ್ಲ ಪನ್ನೀರೇ ಆಗಿತ್ತು. ಗಾಳಿಯು ಬಲವತ್ತರವಾದ ಧೂಪವಾಸನೆಯಿಂದ ಕೂಡಿ ಪರಿಮಳಮಯವಾಗಿತ್ತು. ಅಲ್ಲಿ ತಿನ್ನುವ ಪದಾರ್ಥಗಳನ್ನು ಬೆಳೆಯಬೇಕಾದದ್ದೇ ಇರಲಿಲ್ಲ. ಗಾಳಿಯೂ ನೀರೂ ವನಭೂಮಿಗಳೂ ಆಹಾರವನ್ನು ಒದಗಿಸುತ್ತ ಸಾವಿರಾರು ವರ್ಷಗಳಾದರೂ ಹೀಗೆಯೇ ಇರುವ ಹಾಗೆ ಇದ್ದವು. ಭೂಮಿಯನ್ನು ಉಳುವ ತೊಂದರೆಯನ್ನು ಯಾರೂ ತೆಗೆದುಕೊಳ್ಳಬೇಕಾದದ್ದಿರಲಿಲ್ಲ. ಜನಸಂಖ್ಯೆಯು ನೆಲೆಯಿಲ್ಲದೆ ಹೆಚ್ಚಿದರೆ ಮಾತ್ರ ಸ್ವಲ್ಪ ಯೋಚಿ

ಸುಪ ಹಾಗಿತ್ತು. ಅಲ್ಲಿ ಮನೆ, ಮಠ, ಹಾಸಿಗೆ, ಹೊದ್ದಿಕೆ ಏನೂ ಇಲ್ಲ. ಸುವಾಸನೆಯುಳ್ಳ ಮೃದುವಾದ ಹಸುರುನೆಲವೇ ವಿಶ್ರಾಂತಿಗೆ ಸುಖಕರವಾದ ಶಯ್ಯೆ. ವಿಶ್ವಾಮಿತ್ರರು ಮಳೆಗಾಲದ ವಾಸಕ್ಕೆ ತಮ್ಮ ಭೂಮಿಯ ಮೇಲೆಲ್ಲ ಪರ್ವತಗಳಲ್ಲಿ ಹಿತಕರವಾದ ಏಕಾಂತಸ್ಥಲಗಳನ್ನು ಕಲ್ಪಿಸಿದರು. ಅಲ್ಲಿಯ ಮಾರ್ಗಗಳಲ್ಲೆಲ್ಲ ತೀಕ್ಷ್ಣವಾದ ಸೂರ್ಯನ ಕಿರಣಗಳು ಬರದಂತೆ ಮೇಲೆ ತಡೆ ಇತ್ತು. ಮತ್ತು ಮಧ್ಯಾಹ್ನಕಾಲದಲ್ಲಿ ಅಲ್ಲಲ್ಲಿ ಮಂಜುಗಡ್ಡೆಗಳಿದ್ದು ತಣ್ಪನ್ನುಂಟುಮಾಡುತ್ತಿದ್ದವು. ಬಿಸಿಲ ತಾಪವಿದ್ದಾಗ ಒಬ್ಬನ ಮನಸ್ಸಿಗೆ ಹಿತವಾಗಬೇಕಾದರೆ ಈ ನೆರಳಿನ ಮಾರ್ಗಕ್ಕೆ ತಲೆಹಾಕಿದರೆ ಸಾಕಾಗಿತ್ತು. ವಿಶ್ವಾಮಿತ್ರರು ತಾವೇ ಆ ಸ್ವಭಾವವೈಚಿತ್ರ್ಯದ ಸೊಗಸಿಗೆ ಮರುಳಾದರು. ಆದ್ದರಿಂದ ಅವರು ಪರ್ವತಗಳ ತುದಿಗೆ ಹತ್ತುವದಕ್ಕೆ ತಕ್ಕ ಅನುಕೂಲತೆಗಳನ್ನು ಕಲ್ಪಿಸಿದ್ದರು. ಪರ್ವತದ ಅತ್ಯಂತವಾದ ಉನ್ನತಪ್ರದೇಶವನ್ನು ಮೊದಲು ಮಾಡಿಕೊಂಡು ಸಮುದ್ರದ ಅತ್ಯಂತವಾದ ನಿಮ್ನಪ್ರದೇಶದವರೆಗೂ ಇರುವ ಪ್ರತಿಯೊಂದು ವಸ್ತುವನ್ನೂ ತಪ್ಪದೆ ಪರಿಶೀಲಿಸುವದಕ್ಕೆ ಜನರಿಗೆ ಬಗೆಬಗೆಯಾದ ಸಾಧನೆಗಳನ್ನು ಕಲ್ಪಿಸಿದ್ದರು.



## ಹೊಸ ಮನುಷ್ಯ

ಇನ್ನು ಮನುಷ್ಯರಾದರೊ, ಆ ಹೊಸಭೂಮಿಯ ಮೇಲಿದ್ದ ಜನರೆಲ್ಲ ಹೊಸಬಗೆಯವರಾಗಿದ್ದರು. ಅವರ ಸ್ಥಿತಿಯು ವಿಶ್ವಾಮಿತ್ರರ ಇಷ್ಟವನ್ನೇ ಅನುಸರಿಸಿತ್ತು. ಅಲ್ಲಿಯ ಜನರೆಲ್ಲರೂ ಸಂತೋಷಪೂರ್ಣರಾಗಿದ್ದರು. ವ್ಯಸನಕ್ಕೆ ಕಾರಣವಾದದ್ದೇನೂ ಅಲ್ಲಿರಲಿಲ್ಲ. ಅತ್ಯಂತ ಬುದ್ಧಿಶಾಲಿಗಳು ಕೂಡ ತಮ್ಮ ಬುದ್ಧಿಶಕ್ತಿಯನ್ನು ಇನ್ನೂ ಬೆಳೆಸಿಕೊಳ್ಳುವದಕ್ಕೆ ಅವಕಾಶವಿತ್ತು. ಬ್ರಾಹ್ಮಣರು ಎಂದಿಗೂ ಬ್ರಹ್ಮನ ಮುಖದಿಂದ ಬಂದವರಲ್ಲವೆಂದೂ ಅವರು ತಮ್ಮ ಮನಸ್ಸಿನ ಒಳ್ಳೆ ಪ್ರವೃತ್ತಿಯಿಂದ ತಾವೇ ಬ್ರಾಹ್ಮಣತ್ವವನ್ನು ಪಡೆದವರೆಂದೂ ಸ್ವಾರ್ಥವು ತಲೆ

ದೋರಿದೀಚೆಗೆ ಅವರಬಾಳು ನಾಚಿಕೆಗೇಡಾಯಿತೆಂದೂ ವಿಶ್ವಾಮಿತ್ರರು ನಂಬಿದ್ದರು. ಆದ್ದರಿಂದ ಯಾರು ಬೇಕಾದರೂ ತಮ್ಮ ಬುದ್ಧಿಶಕ್ತಿಯನ್ನು ಎಷ್ಟುಬೇಕಾದರೂ ಬೆಳೆಸಿಕೊಳ್ಳಲೆಂದು ವಿಶ್ವಾಮಿತ್ರರು ಪ್ರತಿಯೊಂದು ಕಡೆಯಲ್ಲಿಯೂ ಅಸಂಖ್ಯಾಕವಾದ ವಿದ್ಯಾಶಾಲೆಗಳನ್ನು ಏರ್ಪಡಿಸಿದರು. ರಾಜಕೀಯಪದ್ಧತಿಗಳನ್ನೂ ನೀತಿಪದ್ಧತಿಗಳನ್ನೂ ತಿಳಿಸುವದಕ್ಕೆ ಇಂಥವರೇ ಆಗಬೇಕೆಂಬ ಪಕ್ಷಪಾತವೇನೂ ಇರಲಿಲ್ಲ. ಈ ಕೆಲಸಕ್ಕೆ ಯಾರು ಬೇಕಾದರೂ ಸೇರಬಹುದಾಗಿತ್ತು. ತರ್ಕ ಒಂದು ಮಾತ್ರ ಎಲ್ಲರಿಗೂ ಗೌರವಾರ್ಹವಾಗಿತ್ತು. ಇನ್ನು ಯಾವದರ ಮೇಲೆಯೂ ಯಾರಿಗೂ ಹೆಚ್ಚು ವಿಶ್ವಾಸವಿರಲಿಲ್ಲ. ಎಲ್ಲರೂ ಪ್ರತಿದಿವಸವೂ ಆ ತರ್ಕದೇವತೆಯನ್ನೇ ಆರಾಧಿಸುತ್ತಿದ್ದರು.

ಇನ್ನು ಅವರ ಪರಸ್ಪರ ಪ್ರೀತಿಯೊ? ಅವರೆಲ್ಲರೂ ಒಬ್ಬರನ್ನೊಬ್ಬರು ಅತಿಯಾಗಿ ಪ್ರೀತಿಸುತ್ತಿದ್ದರು. ಅವರೆಲ್ಲರೂ ಸಮಾನಪದವಿಯಲ್ಲಿದ್ದರು. ಯಾವನಾದರೂ ಯಾವ ವಿಷಯದಲ್ಲಾದರೂ ಒಂದು ಹೆಜ್ಜೆ ಮುಂದಾದರೂ ಅವನು ತನ್ನ ತಿಳಿವಳಿಕೆಯನ್ನು ಇತರರಿಗೂ ಹೇಳಿ ಅವರನ್ನೂ ತನ್ನ ಸ್ಥಿತಿಗೆ ತರುತ್ತಿದ್ದನು. ವಿಶ್ವಾಮಿತ್ರರ ಭೂಮಿಯ ಮೇಲೆ ಎಲ್ಲರೂ ಸುಂದರರು. ಒಬ್ಬರನ್ನೊಬ್ಬರು ನೋಡಿದ ಮಾತ್ರದಿಂದಲೇ ಮನಸ್ಸು ಆನಂದಪರವಶವಾಗುತ್ತಿರುವದೇ ಅಲ್ಲಿಯ ಪ್ರತಿಯೊಬ್ಬನ ಲಕ್ಷಣ. ಅಲ್ಲಿ ಒಬ್ಬರನ್ನೊಬ್ಬರು ನೋಡಿದಾಗ ತಲೇ ಬಗ್ಗಿಸುವದಾಗಲಿ ಕೈಗಳನ್ನು ಹಿಡಿಯುವದಾಗಲಿ ಯಾವದೂ ಇಲ್ಲ; ಮನಃಪೂರ್ವಕವಾಗಿ ಒಬ್ಬರನ್ನೊಬ್ಬರು ಅಪ್ಪಿಕೊಳ್ಳುವದೊಂದೇ. ಅಲ್ಲಿಯ ಪ್ರತಿಯೊಬ್ಬನೂ ಉದ್ಯೋಗಪರನು; ಪ್ರತಿಯೊಬ್ಬನೂ ವೃದ್ಧಿಯನ್ನೇ ಹೊಂದುತ್ತಿರುವನು. ಆ ಹೊಸ ಪ್ರಪಂಚದ ಜನರು ಹೊಸ ಶಕ್ತಿಯ ಆವೇಶದಿಂದ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸುತ್ತಿದ್ದರು. ಅವರು ಪ್ರಕೃತಿಶಾಸ್ತ್ರದ ತತ್ತ್ವವನ್ನು ಕಂಡುಹಿಡಿಯುವ ಉದ್ದೇಶದಿಂದ ಆಗಾಗ ಪರ್ವತಶಿಖರಗಳಿಗೆ ಹತ್ತುವರು. ಕೆಲವರು ಸಮುದ್ರತಲದ ಮರ್ಮಗಳನ್ನು ಸ್ಪಷ್ಟವಾಗಿ ತಿಳಿಯುವದಕ್ಕಾಗಿ ಹೋಗುತ್ತಿರು

ವರು. ಅವರು ಒಮ್ಮೊಮ್ಮೆ ಆಕಾಶದಲ್ಲಿ ಜ್ಯೋತಿಶ್ಚಕ್ರವನ್ನು ಪರೀಕ್ಷಿಸುತ್ತಿರುವರು. ಎಲ್ಲರೂ ತಮ್ಮ ತಮ್ಮ ಸ್ವಂತದ ಮತ್ತು ತಮ್ಮ ತಮ್ಮ ಸಮುದಾಯದ ಪುರೋವೃದ್ಧಿಯನ್ನು ಬಯಸಿ ಎಡೆಬಿಡದೆ ಕೆಲಸಮಾಡುತ್ತಿದ್ದರು.

ವಿಶ್ವಾಮಿತ್ರರ ಪ್ರಪಂಚದಲ್ಲಿ ಮದುವೆಯ ನಿರ್ಬಂಧವೇನೂ ಇಲ್ಲ. ಅದು ಇಲ್ಲದಿದ್ದರೂ ಅವರಲ್ಲಿ ಒಂದು ಸಲ ಒಬ್ಬೊಬ್ಬರಿಗೆ ಮನಸ್ಸು ಸೇರಿಬಿಟ್ಟಿತೆಂದರೆ ಅದಕ್ಕೆ ಅಗಲಿಕೆ ಎಂಬುದೇ ಇಲ್ಲದ ಹಾಗೆ ಇತ್ತು. ಒಂದು ಪಕ್ಷ ಅಂಥ ಅಗಲಿಕೆ ಎಲ್ಲಿಯಾದರೂ ಕಂಡರೂ ಅವರು ಮತ್ತೆ ಮೂರುವರ್ಷಗಳ ಕಾಲವನ್ನು ನಿರೀಕ್ಷಿಸಿದ ಹೊರತು ಯಾರೂ ಇನ್ನೊಬ್ಬರನ್ನು ಸೇರಿಸಿಕೊಳ್ಳುತ್ತಿರಲಿಲ್ಲ. ಆ ನಡೆವಳಿಕೆಯಲ್ಲಿಯೂ ಯಾರ ಮೇಲೆಯೂ ಯಾವ ತಪ್ಪನ್ನೂ ಹೊರಿಸುವ ಹಾಗೆ ಇರಲಿಲ್ಲ. ಏಕೆಂದರೆ ಪ್ರತಿಯೊಬ್ಬರಿಗೂ ಅವರವರ ಇಂದ್ರಿಯಗಳ ಮೇಲೆ ಸರ್ವಾಧಿಕಾರವಿತ್ತು. ಒಬ್ಬನು ಮತ್ತೊಬ್ಬನ ಸ್ವತ್ತನ್ನು ಹೊತ್ತುಕೊಂಡು ಹೋಗುವದು ಮುಂತಾದ ಕ್ರೂರವಾದ ತಪ್ಪಿತಗಳು ಅಲ್ಲಿ ಯಾರಿಗೂ ಗೊತ್ತೇ ಇಲ್ಲ.

ಎಲ್ಲರಿಗೂ ಸಂಗೀತದಲ್ಲಿ ಮತ್ತು ಇತರ ಕುಶಲವಿದ್ಯೆಗಳಲ್ಲಿ ಬಲು ಅಕ್ಕರೆ. ಪ್ರತಿದಿನವೂ ಎಲ್ಲರೂ ಸೇರಿ ಹಾಡುವರು ಮತ್ತು ಕುಣಿಯುವರು. ವಿಶ್ವಾಮಿತ್ರರ ಭೂಮಂಡಲದಲ್ಲಿ ಪ್ರತಿದಿವಸವೂ ಹಬ್ಬವೆ. ಪ್ರಜೆಗಳನ್ನು ಬೆದರಿಸುವದಕ್ಕೆ ಯಾವ ರಾಜನೂ ಯಾವ ಅಧಿಕಾರಿಯೂ ಇಲ್ಲ. ಪ್ರಜೆಗಳು ಆಡಿದ್ದೇ ಆಟ. ಮನುಷ್ಯರಲ್ಲೊಬ್ಬೊಬ್ಬರಿಗೆ ಭಿನ್ನಾಭಿಪ್ರಾಯಗಳು ಬರುವಂಥ ಅವಕಾಶವನ್ನೆಲ್ಲ ವಿಶ್ವಾಮಿತ್ರರು ಜಾಗರೂಕತೆಯಿಂದ ತಪ್ಪಿಸಿದ್ದರು. ಯಾವನಿಗೂ ಐಶ್ವರ್ಯದ ಮೇಲಣ ಅತ್ಯಾಶೆಯಾಗಲಿ ಕೀರ್ತಿಯ ಮಹತ್ವಾಕಾಂಕ್ಷೆಯಾಗಲಿ ಪ್ರಭುತ್ವದ ಬಯಕೆಯಾಗಲಿ ಇಲ್ಲ. ವಿನೋದಕಾಲಕ್ಷೇಪವೇ ಅವರನ್ನು ಏಕಾಧಿಪತ್ಯಕ್ಕೊಳಪಡಿಸಿದ್ದಿತು. ಈ ದಿನ ಒಬ್ಬನು ಇನ್ನೊಬ್ಬನ ಆನಂದಾನುಭವಕ್ಕೆ ಭಾಗಿಯಾಗುವನು; ಮರುದಿನ ಸರಿಯಾಗಿ ಅವನ ಮುಯ್ಯಿ ನಡೆಯುವದು.

ವಿಶ್ವಾಮಿತ್ರರ ಪ್ರಪಂಚದಲ್ಲಿ ಮನುಷ್ಯರಿಗೆ ಸಾವಿಲ್ಲ. ಆದರೆ ಅವರು ಒಂದುಗ್ರಹದಿಂದ ಇನ್ನೊಂದು ಗ್ರಹಕ್ಕೆ ಹೋಗುತ್ತಿದ್ದರು. ಅದನ್ನು ಏಳೆಂಟು ಸುತ್ತು ತಿರುಗಿ ಮತ್ತೆ ಭೂಮಿಗೆ ಬರುವವರೆಗೆ ಅವರು ಹೀಗೆ ಸುತ್ತುತ್ತಲೇ ಇರುವರು. ಅಲ್ಲಿಯ ಜನನ ಎರಡುಬಗೆ—ಒಂದು ಹೊಸ ಜನನ, ಇನ್ನೊಂದು ಗ್ರಹಗಳಿಂದ ತಿರುಗಿ ಬರುವದು. ಹೊಸ ಜನನಗಳ ಸಂಖ್ಯೆ ಇಷ್ಟೇ ಎಂದು ನಿರ್ಣಯವಾಗಿತ್ತು. ಪ್ರತಿದಿನವೂ ಒಂದು ಗೊತ್ತಾದ ಸಂಖ್ಯೆಯವರು ಮಾತ್ರ ಹುಟ್ಟುತ್ತಿದ್ದರು. ಉಳಿದ ಜನರೆಲ್ಲ ಗ್ರಹಗಳಿಂದ ತಿರುಗಿ ಬಂದವರು. ವಿಶ್ವಾಮಿತ್ರರ ಭೂಮಿಯು ಬಹು ಸ್ವಲ್ಪಕಾಲ ಇತ್ತು. ಆ ಹೊಸಭೂಮಿಯು ಬಹುಕಾಲ ಇದ್ದು ಹೊಸ ಜನಗಳು ಅಸಂಖ್ಯಾಕರಾಗಿದ್ದರೆ ಏನಾಗುತ್ತಿತ್ತೋ ತಿಳಿಯದು.



## ಕವಿತೆಯ ಉತ್ಪತ್ತಿ

ಋಭುಗಳ ಗಾನವನ್ನು ಕೇಳುವದಕ್ಕೆ ಹೋದ ಮೂವರು ಸಭಿಕರಲ್ಲಿ ವಸಿಷ್ಠವಿಶ್ವಾಮಿತ್ರರಲ್ಲಿ ತೋರಿಬಂದ ಪರಿಣಾಮವನ್ನು ಹೇಳುವ ಸಡಗರದಲ್ಲಿ ಮೂರನೆಯವನ ವಿಷಯವನ್ನೇ ಮರೆತುಬಿಟ್ಟೆನಲ್ಲ! ಎಂಥ ಪ್ರಮಾದ!! ಒಳ್ಳೆಯದು. ಈಗಾದರೇನು? ಕಾಲಾತೀತವಾಗಿಲ್ಲ. ಮೂರನೆಯವನಾದ ವಾಲ್ಮೀಕಿಯು ದುಃಖದಿಂದ ಕಣ್ಣೀರು ಸುರಿಸುತ್ತ ಹಿಮಾಲಯದ ಕಾಡುಗಳಲ್ಲಿ ಅಲೆದಾಡುತ್ತಿದ್ದನಷ್ಟೆ. ಅವನ ಗೋಳಾಟಕ್ಕೂ ಅವನ ಮನಸ್ಸಿನ ಸಂಕಟಕ್ಕೂ ಕೊನೆಯೇ ಇರಲಿಲ್ಲ. ತಾನು ಎಷ್ಟು ಪಾಪರಾಶಿಗಳನ್ನು ಮಾಡಿದ್ದೇನೆಂದೂ ಅದಕ್ಕೆ ಯಾವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂದೂ ಅವನು ಯೋಚಿಸುತ್ತ ಹೋದಹಾಗೆಲ್ಲ ಅವನ ಎದೆಯು ಬಿರಿದು ಹೋಗುತ್ತಿತ್ತು. ಅವನಿಗೆ ಎಲ್ಲಿಯೂ ಸಮಾಧಾನವೇ ದೊರೆಯುತ್ತಿರಲಿಲ್ಲ. ಇನ್ನೆಷ್ಟುಮಾತ್ರವೂ ಅವನು ಕಳ್ಳರ ಕಡೆಗೆ ಮನಸ್ಸುಕೊಡಲಿಲ್ಲ. ಕಳ್ಳರು ಅವನಿಗಾಗಿ ಎಲ್ಲೆಲ್ಲಿಯೋ ಹುಡುಕಿದರು. ಅವರಿಗೆ ಅವನು ಸಿಕ್ಕಲಿಲ್ಲ. ಮನುಷ್ಯರನ್ನು ಕಂಡಮಾತ್ರಕ್ಕೇ ಅವನ ಹೊಟ್ಟೆಯಲ್ಲಿ ಉರಿಯುತ್ತಿರುವ ಪಶ್ಚಾತ್ತಾಪ

ವೆಂಬ ಬೆಂಕಿಯು ಪ್ರಜ್ವಲಿಸುತ್ತಿತ್ತು. ಅವನ ಸುಖದುಃಖಕ್ಕೆ ಆ ಕಾಡಿನ ಮೃಗಪಕ್ಷಿಗಳೇ ಭಾಗಿಗಳಾಗಿದ್ದವು. ಅವನು ಆ ಕಾಡಿನ ಮೃಗಪಕ್ಷಿಗಳಿಗೆ ಅನ್ನನೀರು ಕೊಡುತ್ತ,ಮೈತೊಳೆಯುತ್ತ,ತುರಿಸುತ್ತ ಮುತ್ತುಮುದ್ದಿಸುತ್ತ ಅಲ್ಲಿಯೇ ಇದ್ದು ಎಷ್ಟೋ ದಿನಗಳನ್ನು ಕಳೆದನು.

ಹೀಗಿರುವಾಗ ಒಂದುದಿನ ಒಂದು ಗಂಡು ಕ್ರೌಂಚಪಕ್ಷಿಯೂ ಒಂದು ಹೆಣ್ಣು ಕ್ರೌಂಚಪಕ್ಷಿಯೂ ಪರಸ್ಪರ ಪ್ರೀತಿಯಿಂದ ಸುಖಾನುಭವವನ್ನು ಮಾಡುತ್ತಿದ್ದವು. ಅವೆರಡೂ ಒಂದರ ಕೊಕ್ಕನ್ನು ಇನ್ನೊಂದರ ಕೊಕ್ಕಿನೊಳಕ್ಕೆ ಇಡುತ್ತಲೂ ಒಂದು ಇನ್ನೊಂದನ್ನು ಅಪ್ಪಿಕೊಳ್ಳುತ್ತಲೂ ಒಂದರಮಗ್ಗುಲಲ್ಲೊಂದು ಕುಣಿಯುತ್ತಲೂ ಒಂದನ್ನು ಬಿಟ್ಟು ಇನ್ನೊಂದು ಹಿಂಜರಿಯುತ್ತಲೂ ವಿಹಾರಮಾಡುತ್ತಿದ್ದವು. ಹೀಗಿರುತ್ತ ಅವು ಅವ್ಯಕ್ತಮಧುರಧ್ವನಿಯನ್ನು ಮಾಡುತ್ತಿದ್ದಾಗ ವಾಲ್ಮೀಕಿಯು ಹರ್ಷಪರವಶನಾಗಿ ಕುಳಿತು ಅವುಗಳ ವಿನೋದವನ್ನು ನೋಡುತ್ತ ತನ್ನಲ್ಲಿ ತಾನು—"ಇವು ನನಗಿಂತ ಎಷ್ಟು ಸುಖಿಗಳಾಗಿವೆ! ನಾನು ಹೀಗೆಯೇ ಹರ್ಷಪೂರ್ಣನಾಗಿ ಏಕೆ ಆಡ್ಡಾಡಬಾರದು? ನನಗೂ ಬೇಕಾದಷ್ಟು ಜೊತೆಗಾರರಿದ್ದಾರೆ."—ಎಂದು ಯೋಚಿಸಿದನು. ಅವನಿಗಿನ್ನೇನೂ ತೋಚಲಿಲ್ಲ. ಹಳೇ ಸಂಗತಿಗಳೇ ನೆನಪಿಗೆ ಬಂದು ಮತ್ತೆ ಅವನ ಮನಸ್ಸನ್ನು ಕಳವಳಗೊಳಿಸಿದವು.

ಹೀಗೆ ಅವನು ಆಲೋಚಿಸುತ್ತಿರುವಾಗಲೇ ಎಲ್ಲಿಂದಲೋ ಬಂದು ಒಂದು ಬಾಣವು ತಗಲಿ ಆ ಪಕ್ಷಿಗಳಲ್ಲೊಂದನ್ನು ಮರಣೋನ್ಮುಖವಾಗಿ ಮಾಡಿ ನೆಲಕ್ಕೆ ಕೆಡವಿತು. ಅದು ನೆಲದ ಮೇಲೆ ಬಿದ್ದು ಸಾಯಲಾರದೆ ಒದ್ದಾಡುತ್ತಿತ್ತು. ಅದರ ಗರಿಯನ್ನು ಕಿತ್ತುಹಾಕುವದಕ್ಕಾಗಿ ಅದರ ಬಳಿಗೆ ಒಬ್ಬ ಬೇಡನು ಓಡಿ ಬಂದನು. ಆಗ ವಾಲ್ಮೀಕಿಗೆ ತಡೆಯುವದಾಗಲಿಲ್ಲ. ಕೋಪವು ಹೆಚ್ಚಿ ಒಡನೆ ಅವನ ಬಾಯಿಂದ ಹೊರಟದ್ದೇನೆಂದರೆ:—

"ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಸ್ಸಮಾಃ ।
ಯತ್ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಮ್" ॥

ತಾ|| ಎಲೆ, ಬೇಡನೆ, ವಿನೋದವಾಡುತ್ತಿದ್ದ ಕ್ರೌಂಚಪಕ್ಷಿಗಳ ಲ್ಲೊಂದನ್ನು ಕೊಂದಿರುವೆಯಾದ ಕಾರಣದಿಂದ ನೀನು ಬಹುಕಾಲ ಬದುಕಬೇಡ.

ಈ ಶಬ್ದಗಳು ಅವನ ಮುಖದಿಂದ ಬರುತ್ತಲೆ ಒಬ್ಬ ಸುಂದರ ಸ್ತ್ರೀಯು ಅಲ್ಲಿ ಹರಿಯುತ್ತಿದ್ದ ಒಂದು ಝರಿಯಿಂದ ಹೊರಹೊರಟ ತನ್ನ ಕಾಂತಿಮಂಡಲದಿಂದ ಕಾಡುದಾರಿಯನ್ನು ಬೆಳಗುತ್ತ ಅವನ ಮುಂದೆ ಬಂದು ನಿಂತಳು. ಆಕೆಯ ರೂಪಲಾವಣ್ಯವನ್ನು ನೋಡಿ ದರೆ ಅಪ್ಸರಸ್ತ್ರೀಯರೂ ನಾಚಿಕೊಳ್ಳುವ ಹಾಗೆ ಇತ್ತು. ಆಕೆಯ ಕಳೆಯು ಪೂರ್ಣಚಂದ್ರನ ಕಳೆಗಿಂತಲೂ ಮನಸ್ಸಿಗೆ ಆನಂದಕರವಾ ಗಿತ್ತು. ಆ ಸುಂದರಸ್ತ್ರೀಯ ರೂಪಿನ ರಮಣೀಯತೆಗೆ ಎಲ್ಲರೂ ಬೆರಗಾದರು. ಅಲ್ಲಿ ಬಿದ್ದಿದ್ದ ಪಕ್ಷಿಯನ್ನು ಎತ್ತುವದಕ್ಕೆ ಕೈಸೀಡಿದ್ದ ಬೇಡನು ಉಸಿರಾಡದೆ ನಿಂತನು. ಪಕ್ಷಿಗಳೂ ಮತ್ತು ಮೃಗಗಳೂ ಸದ್ದುಮಾಡದೆ ಸುಮ್ಮನಾದವು. ಆ ಸುಂದರಸ್ತ್ರೀಯು ಮುಂದೆ ಬಂದು ನಿಂತಾಗ ವಾಲ್ಮೀಕಿಗೆ ಮಾತೇ ತೋಚಲಿಲ್ಲ. ಮತ್ತು ಆಕೆ ಅದಕ್ಕೆ ಅವಕಾಶವನ್ನೂ ಕೊಡಲಿಲ್ಲ. ಆಕೆಯು ವಾಲ್ಮೀಕಿಯನ್ನು ಕುರಿತು—"ಆಶ್ಚರ್ಯಪಡಬೇಡ. ನಾನು ಬ್ರಾಹ್ಮಣರ ಕುಲದೇವತೆ ಯಾದ ಸರಸ್ವತಿ. ನಿನ್ನಷ್ಟು ಮೃದುಹೃದಯರು ನನಗೆ ಬೇರೆ ಯಾರೂ ಕಾಣಲಿಲ್ಲ. ಆದ್ದರಿಂದ ನಾನು ನಿನಗೆ ಈ ವೀಣೆಯನ್ನು ಬಹುಮಾನ ವಾಗಿ ಕೊಡಬೇಕೆಂದು ಬಂದಿದ್ದೇನೆ. ಇದು ನಿನ್ನ ಕೈಗೆ ಭೂಷಣ ವಾಗುವದಲ್ಲದೆ ಮುಂದೆ ಬರುವ ನಿನ್ನಂಥ ಜನರಿಗೂ ಭೂಷಣವಾಗು ತ್ತದೆ. ಪರರ ಕ್ಷೇಮಕ್ಕಾಗಿಯೇ ನೀನು ಇದನ್ನು ಉಪಯೋಗಿಸ ಬೇಕು."—ಎಂದು ಹೇಳಲು ವಾಲ್ಮೀಕಿಯು ಆಕೆಯ ಪಾದಗಳಿಗೆ ಅಡ್ಡಬಿದ್ದು ವೀಣೆಯನ್ನು ತೆಗೆದುಕೊಂಡನು. ಅತ್ತ ಒಡನೆಯೇ ಸರಸ್ವತಿಯು ಮಾಯವಾದಳು.



# ಐದನೆ ಸನ್ನಾಹ



## ಹಳೇ ಪ್ರಪಂಚ

ಪ್ರಕೃತ ವಾಲ್ಮೀಕಿಯ ಮಾತು ಹಾಗಿರಲಿ; ವಿಶ್ವಾಮಿತ್ರರು ಹೊಸ ಪ್ರಪಂಚವನ್ನು ಸೃಷ್ಟಿಮಾಡಿಕೊಂಡು ಅಲ್ಲಿಯೇ ನಿಂತ ಮೇಲೆ ಅವರ ಹಳೇರಾಜ್ಯವೇನಾಯಿತೆಂಬುದನ್ನು ತಿಳಿಯುವದಕ್ಕೆ ಎಲ್ಲರಿಗೂ ಕುತೂಹಲವಿರಬಹುದು. ವಿಶ್ವಾಮಿತ್ರರು ತಮ್ಮ ಹೊಸ ಪ್ರಪಂಚವನ್ನು ಸೃಷ್ಟಿಮಾಡುವದಕ್ಕೆ ಹೋದ ಮೇಲೆ ಹಳೇ ಪ್ರಪಂಚದ ಗತಿಯೇನಾಯಿತೆಂಬುದನ್ನು ಸುಲಭವಾಗಿಯೇ ಊಹಿಸಬಹುದು. ಎಲ್ಲಿ ನೋಡಿದರೂ ಆಗ ಕೇಳುವವರೇ ದಿಕ್ಕಿಲ್ಲ. ಎಲ್ಲ ಕಡೆಯಲ್ಲಿಯೂ ಕೊಳ್ಳೆ, ಗಾಬರಿ—ಇವುಗಳ ಮಯವಾಗಿದ್ದು ನಿರಂತರವಾಗಿ ರಕ್ತಪ್ರವಾಹವು ಹರಿಯುತ್ತಿತ್ತು. ಚರಿತ್ರೆಯಲ್ಲಿ ಅರಾಜಕಸ್ಥಿತಿಯ ವಿವರಣೆಯನ್ನು ನಾವು ಎಷ್ಟೋ ಸಲ ಓದಿ ನೋಡಿದ್ದೇವೆ. ಆ ಸ್ಥಿತಿಯು ಸಾವಿರಪಾಲು ಆಗ ಪ್ರತ್ಯಕ್ಷವಾಗಿತ್ತು. 

ಆಗ ಭೂಮಂಡಲದಲ್ಲಿ ಬ್ರಾಹ್ಮಣರು, ಕ್ಷತ್ರಿಯರು, ರಾಕ್ಷಸರು, ವಾನರರು—ಎಂಬ ನಾಲ್ಕು ಜನಾಂಗದವರಿದ್ದರು. ವಿಶ್ವಾಮಿತ್ರರು ತಮ್ಮ ಪ್ರತಿಕಕ್ಷಿಗಳಾದ ಮ್ಲೇಚ್ಛ, ಯವನ, ಹೂಣ ಮೊದಲಾದ ಜನಾಂಗಗಳ ಪ್ರಭುತ್ವವನ್ನೆಲ್ಲ ಹಾಳುಮಾಡಿದ್ದರು. ಅಂಥ ಅನೇಕ ರಾಜರು ಯುದ್ಧದಲ್ಲಿ ಬಲಿಯಾಗಿದ್ದರು. ಅನೇಕರು ತಲೆ ತಪ್ಪಿಸಿಕೊಂಡು ಹೋಗಿ ವಸಿಷ್ಠರನ್ನು ಬೆನ್ನುಬಿದ್ದರು. ಉಳಿದವರು ಎಲ್ಲಿಗೆ ಹೋದರೋ ಗೊತ್ತೇ ಇಲ್ಲ. ಅವರ ರಾಜ್ಯಗಳಲ್ಲೆಲ್ಲ ಅರಾಜಕತ್ವವುಂಟಾಯಿತು. ಕೊಳ್ಳೆಗಾರರೂ ಕೊಲೆಗಾರರೂ ಗುಂಪು ಕಟ್ಟಿಕೊಂಡು ಹಗಲುಹೊತ್ತಿನಲ್ಲಿಯೇ ಸೂರೆಮಾಡುತ್ತ ಬಂದರು. ಅವರು ದೊಡ್ಡ ಪಟ್ಟಣಗಳಿಗೆಲ್ಲ ಬೆಂಕಿಯನ್ನು ಹತ್ತಿಸಿ ಊರೂರುಗಳನ್ನೆಲ್ಲ ತಮ್ಮ ಕತ್ತಿಗಳಿಂದ ಸವರಿದರು. ಅವರಿಗೆ ಎಲ್ಲಿಯೂ ತಡೆಯೇ ಇಲ್ಲದೆ ಹೋಯಿತು.

ವಾಲ್ಮೀಕಿಯು ಆಗ ಕಳ್ಳರ ಗುಂಪಿನಿಂದ ಹೊರಗಾಗಿದ್ದನು.

ಆದರೆ ಅವನ ಗುಂಪಿನವರು ಮಾತ್ರ ತಮ್ಮ ಕೆಲಸವನ್ನು ಬಿಡಲಿಲ್ಲ. ಅವರು ಗುಹಕನೆಂಬವನನ್ನು ತಮ್ಮ ನಾಯಕನನ್ನಾಗಿ ಮಾಡಿಕೊಂಡು ಕೊಳ್ಳೆಹೊಡೆಯುವದಕ್ಕೆ ಮೊದಲು ಮಾಡಿದರು. ಅವರ ಕೊಳ್ಳೆಯು ಒಂದು ದಿನ ಜಮ್ನೋತ್ರಿಯಲ್ಲಿ, ಮರುದಿನ ಪ್ರಯಾಗದಲ್ಲಿ, ಅಥವಾ ಈ ದಿನ ಶತದ್ರುನದಿಯ ಸಂಗಮಸ್ಥಲದಲ್ಲಿ, ನಾಳೆ ಸರಯೂನದಿಯ ದಡದಲ್ಲಿ. ಈ ಸಮಯದ ಕಳ್ಳರ ಕೂಟವನ್ನು ನೋಡಿದರೆ ಕಲಿಯುಗ ದಲ್ಲಿ ಆಗಬೇಕಾಗಿರುವಂತೆ ಎಲ್ಲಜಾತಿಯವರೂ ಒಂದೇ ಆದಂತೆ ಕಾಣು ತ್ತಿತ್ತು. ಮ್ಲೇಚ್ಛರು, ಯವನರು, ರಾಕ್ಷಸರು, ವಾನರರು, ಕ್ಷತ್ರಿ ಯರು ಮತ್ತು ಬ್ರಾಹ್ಮಣರು ಕೂಡ ಎಲ್ಲರೂ ದೊಡ್ಡದೊಡ್ಡದಾಗಿ ಗುಂಪುಕಟ್ಟಿಕೊಂಡು ಒಟ್ಟಿಗೆ ತಿನ್ನುವರು; ಒಟ್ಟಿಗೆ ಮಲಗುವರು; ಎಲ್ಲರೂ ಒಂದೇ ವೃತ್ತಿಯನ್ನು ಅನುಸರಿಸುವರು; ಒಂದೇ ವಿಧವಾದ ಸುಖಾನುಭವವನ್ನು ಮಾಡುವರು; ಮತ್ತು ಬೇಕಾದಷ್ಟು ಅಟ್ಟಹಾಸ ದಿಂದ, ವೈಭವದಿಂದ ಮತ್ತು ದಂಭದಿಂದ ಜೀವಿಸುವರು. ಕ್ರೂರವಾದ ಕೊಲೆ ಮತ್ತು ಸುಲಿಗೆ—ಇವೇ ಅವರ ಮುಖ್ಯವೃತ್ತಿಗಳು. ಅವರು ದೇವತೆಗಳಿಗೂ ಹೆದರದಷ್ಟು ಬಲಿತುಕೊಂಡರು.

ಈ ಭಯಂಕರವಾದ ಅರಾಜಕಸಮಯದಲ್ಲಿ ಕಡೆಗೆ ಒಂದು ಜನಾಂಗವಾದರೂ ಶ್ರೇಷ್ಠತೆಯನ್ನು ಹೊಂದಿದ್ದರೂ ಅಥವಾ ಪ್ರಬಲ ನಾದ ಒಬ್ಬ ರಾಜನಿದ್ದರೂ ಎಷ್ಟೋ ಅನುಕೂಲವಾಗುತ್ತಿತ್ತು. ಆದರೆ ಹಾಗೇನೂ ಇರಲಿಲ್ಲ. ಆಗ ಎಲ್ಲಿ ನೋಡಿದರೂ ಪುರುಡಿನ ಪಂಗಡಗಳೂ ಮತ್ತು ಜನಾಂಗಗಳಲ್ಲೆಲ್ಲ ಪರಸ್ಪರಭೇದಭಾವನೆಯೂ ತುಂಬಿದ್ದವು. ರಾಜಕೀಯಾಧಿಕಾರವನ್ನು ನಡೆಸುತ್ತಿದ್ದ ಗುಂಪಿನವರು ಅತ್ಯಂತ ಕ್ರೂರ ರಾಗಿದ್ದರು. ಇವರ ಕ್ರೂರತನಕ್ಕಿಂತಲೂ ಆ ಕೊಳ್ಳೆಗಾರರ ಮತ್ತು ಕೊಲೆಗಾರರ ಕ್ರೂರತನವೇ ಸಾವಿರಪಾಲು ಮೇಲಾಗಿತ್ತು. ಕೊಲೆಗಾ ರರು ಒಂದೇ ಸಲಕ್ಕೆ ಕೊಂದು ಬಿಡುತ್ತಿದ್ದರು. ಈ ರಾಜಕೀಯಪಂಗ ಡದವರು ಹೇಳಲಶಕ್ಯವಾದ ಖೇದವನ್ನುಂಟುಮಾಡಿ ಅವರನ್ನು ಬಲೀ ಹಾಕುತ್ತಿದ್ದರು.

ಈ ಕಾಲದಲ್ಲಿ ರಾವಣನು ಬಹು ಪ್ರಬಲನಾದ ರಾಜನಾಗಿದ್ದನು. ಕಂಡವರ ಹೆಂಡಿರನ್ನು ಹೊತ್ತುಕೊಂಡು ಹೋಗುವದು, ಐಶ್ವರ್ಯ ವನ್ನು ಸೂರೆಮಾಡುವದು, ರಾಜ್ಯಗಳನ್ನು ಸೇರಿಸಿಕೊಳ್ಳುವದು, ಜನ ರಿಗೆ ಅಪಮಾನಮಾಡುವದು ಮತ್ತು ವಿನೋದಕ್ಕಾಗಿ ಜನರನ್ನು ಹಿಂಸಿಸುವದು—ಇವೇ ಇವನ ದಿನಚರ್ಯೆಗಳಾಗಿದ್ದವು. ರಾವಣ ನಿಗೂ ತನ್ನ ದೇಶದಲ್ಲಿ ಹಗೆಗಳಿಲ್ಲದೆ ಇರಲಿಲ್ಲ. ಅವನ ತಮ್ಮನಾದ ವಿಭೀಷಣನು ಅವನಿಗೆ ಪ್ರತಿಕಕ್ಷಿಯಾಗಿದ್ದನು. ರಾವಣನು ಅವನನ್ನು ಸೆರೆಯಲ್ಲಿಟ್ಟದ್ದಲ್ಲದೆ ಅವನ ಪರವನ್ನು ಹಿಡಿದು ಒಂದು ಮಾತಾಡಿದ್ದ ಕ್ಕಾಗಿ ಅವನ ಮಂತ್ರಿಗಳಲ್ಲೊಬ್ಬನ ಮೂಗನ್ನೂ ಕಿವಿಯನ್ನೂ ಕೊಯ್ಸಿದನು. ವಿಭೀಷಣನು ವಾನರರ ಅಧಿಪತಿಯಾದ ಸುಗ್ರೀವ ನೊಡನೆ ಸ್ನೇಹವನ್ನುಬೆಳೆಸುವ ಸಂಭವವಿತ್ತು. ಆದ್ದರಿಂದ ರಾವಣನು ಸುಗ್ರೀವನ ಮೇಲೆ ತನ್ನ ಸೇನಾಪತಿಗಳಲ್ಲಿ ಅತ್ಯಂತಕ್ರೂರರಾದ ಖರ ದೂಷಣರೆಂಬಿಬ್ಬರನ್ನು ದಂಡಕಾರಣ್ಯದ ಕಾಡಿಗೆ ಕಳುಹಿಸಿದ್ದನು.

ವಾನರರ ಆಧಿಪತ್ಯದಲ್ಲಿ ವಾಲಿಯೆಂಬ ರಾಜನು ಸುಗ್ರೀವನಿಗೆ ಪ್ರತಿಕಕ್ಷಿಯಾಗಿದ್ದನು. ಅವನು ತನ್ನ ತಮ್ಮನ ಹೆಂಡತಿಯನ್ನು ತನ್ನ ಅಂತಃಪುರಕ್ಕೆ ಸೇರಿಸಿಕೊಂಡಿದ್ದನು. ಮತ್ತು ತನ್ನ ಅಭಿಪ್ರಾಯಕ್ಕೆ ಒಪ್ಪದವರನ್ನುದೇಶದಿಂದ ಹೊರಕ್ಕೆ ಹಾಕಿದ್ದನು. ಅಭಿವೃದ್ಧಿದಶೆಯ ಲ್ಲಿದ್ದ ಮಾನುಷಸ್ಥಾನಗಳೆಲ್ಲ ಅವನ ಪರಿವಾರದವರ ಸುಲಿಗೆಯಿಂದ ಭಯಂಕರವಾದ ನಿರ್ಜನಪ್ರದೇಶವಾಗಿದ್ದವು. ಈಗ ನಾವು ಹೇಳುವ ದಂಡಕಾರಣ್ಯವು ಹಿಂದೆ ಊರ್ಜಿತವಾದ ಒಂದು ರಾಜ್ಯವಾಗಿತ್ತು. ವಾಲಿಯು ಅದನ್ನು ನಿರ್ಮೂಲಮಾಡಿ ಸಿಂಹಗಳಿಗೂ ಹುಲಿಗಳಿಗೂ ಮತ್ತು ಬೇರೆ ಮಾಂಸಾಹಾರಿಗಳಾದ ಮೃಗಗಳಿಗೂ ತೌರುಮನೆ ಯಾಗಿ ಮಾಡಿದ್ದನು.

ಬ್ರಾಹ್ಮಣರಲ್ಲಿ ಎರಡು ಪಂಗಡಗಳಿದ್ದವು. ಎರಡು ಪಂಗಡಗಳೇ ಏಕೆ? ಒಬ್ಬೊಬ್ಬರೇ ಒಂದೊಂದು ಪಂಗಡವೆಂದರೂ ಒಪ್ಪುತ್ತಿತ್ತು. ಆದರೂ ಈ ದುರಭಿಮಾನಿಗಳಾದ ಜನರು ಮುಖ್ಯವಾಗಿ ಎರಡು ಪಂಗ

ಪಗಳು. ಅವುಗಳಲ್ಲೊಂದರ ಮುಖಂಡನು ಪರಶುರಾಮನು. ಅವನು ಈ ಭೂಮಂಡಲದಲ್ಲಿ ಕ್ಷತ್ರಿಯರ ಹೆಸರನ್ನೇ ತೊಳೆದುಬಿಡಬೇಕೆಂದು ಹಠವನ್ನು ಹಿಡಿದಿದ್ದನು. ಆದರೆ ಪರಶುರಾಮನನ್ನು ಕಂಡರೆ ಯಾರಿಗೂ ಆಗುತ್ತಿರಲಿಲ್ಲ. ಆದ್ದರಿಂದಲೇ ಅವನು ಸಮುದ್ರದ ದಂಡೆಯ ಮೇಲೆಯೇ ಇರುತ್ತಿದ್ದನು. ಬ್ರಾಹ್ಮಣರು ತಮ್ಮ ವರ್ಚಸ್ಸನ್ನು ಕಳೆದುಕೊಂಡು ಕ್ಷತ್ರಿಯರ ಏಳಿಗೆಗೆ ಅವಕಾಶವನ್ನು ಕೊಟ್ಟರೆಂದು ಅವನಿಗೆ ಬ್ರಾಹ್ಮಣರ ಮೇಲೆ ಹಗೆತನ. ಕೋಟ್ಯಂತರಜನರ ಶಕ್ತಿಯು ತನ್ನಲ್ಲಿರುವದಾಗಿ ಅವನಿಗೆ ನಂಬಿಕೆ ಇತ್ತು. ಅವನು ಬ್ರಾಹ್ಮಣರ ಅನುಷ್ಠಾನಪ್ರಸಂಗಕ್ಕೆ ಎಂದೂ ಸೇರುತ್ತಿರಲಿಲ್ಲ. ಬ್ರಾಹ್ಮಣರ ಇನ್ನೊಂದು ಪಂಗಡದ ಮುಖಂಡರು ವಸಿಷ್ಠರು. ಅವರ ಮಾತು ಇತರರ ಮೇಲೆ ನಡೆಯುತ್ತಿದ್ದರೂ ಅವರು ಕೂಡ ಎಲ್ಲರ ಮೇಲೆಯೂ ಸರ್ವಾಧಿಕಾರವನ್ನೇನೂ ನಡೆಸುವ ಹಾಗೆ ಇರಲಿಲ್ಲ.

ಕೆಲವು ಕಾರಣಗಳಿಂದ ಒಂದು ಗುಂಪಿನ ಕ್ಷತ್ರಿಯರೂ ವಸಿಷ್ಠರ ಹಂಗಿಗೆ ಒಳಗಾಗಿದ್ದರು. ಅವರು ಬ್ರಾಹ್ಮಣರಿಗೂ ಕ್ಷತ್ರಿಯರಿಗೂ ಒಕ್ಕಟ್ಟನ್ನು ಸ್ಥಾಪಿಸುವ ವಿಷಯದಲ್ಲಿ ಬೇಸರಪಡದೆ ವಸಿಷ್ಠರಿಗೆ ಬೆಂಬಲರಾಗಿದ್ದರು. ವಸಿಷ್ಠರಿಗೆ ಬೇಕಾದವರಾಗಿದ್ದ ಕ್ಷತ್ರಿಯರಲ್ಲಿ ಅಯೋಧ್ಯೆಯ ರಾಜನೂ ಮಿಥಿಲೆಯ ರಾಜನೂ ಇಬ್ಬರೂ ಮುಖ್ಯರು. ಪರಶುರಾಮನು ಕ್ಷತ್ರಿಯರನ್ನು ನಿರ್ಮೂಲಮಾಡಬೇಕೆಂದಿದ್ದಂತೆ ಬ್ರಾಹ್ಮಣರನ್ನು ನಿರ್ಮೂಲಮಾಡಬೇಕೆಂದಿದ್ದ ಕ್ಷತ್ರಿಯರ ಗುಂಪಿನ ಮುಖಂಡರು ವಿಶ್ವಾಮಿತ್ರರು.

ವಸಿಷ್ಠರ ಪಂಗಡದವರ ಹೊರತು ಉಳಿದ ಕ್ಷತ್ರಿಯರು ತಮ್ಮ ಜೀವವೇ ಹೋಗುವ ತನಕ ಬಿಡದೆ ಒಬ್ಬರನ್ನೊಬ್ಬರು ಪೀಡಿಸುತ್ತಿದ್ದರು. ಒಂದೊಂದು ಸಲ ವಿಶ್ವಾಮಿತ್ರರ ಮಂತ್ರಿಯು ಬ್ರಾಹ್ಮಣರ ಯಜ್ಞಕರ್ಮಗಳನ್ನು ಕೆಡಿಸುವದಕ್ಕೆ ಬನ್ನಿರೆಂದು ಖರದೂಷಣರಿಗೆ ಅಕ್ಷತೆಯನ್ನು ಕಳುಹಿಸುತ್ತಿದ್ದನು. ಅವನು ತನ್ನ ಹಗೆಗಳ ಮೇಲೆ ಕೈಮಾಡುವಾಗ ಕೊಲೆಗಾರರನ್ನೂ ಸುಲಿಗೆಗಾರರನ್ನೂ ಸೇರಿಸಿ

ಕೊಳ್ಳುವದಕ್ಕೂ ಎಂದೂ ಹಿಂದೆಗೆಯುತ್ತಿರಲಿಲ್ಲ. ಅನೇಕವೇಳೆ ಒಂದೊಂದು ಕ್ಷುದ್ರಕಾರಣದಿಂದಲೇ ಜಗಳವು ಹುಟ್ಟಿ ಬೇಕಾದಷ್ಟು ಹಾವಳಿಯಾಗುತ್ತಿತ್ತು. ಅಂಥ ಉದಾಹರಣೆಗಳನ್ನೆಲ್ಲ ಇಲ್ಲಿ ಕೊಡುವ ಅವಶ್ಯಕವಿಲ್ಲ. ಮುಖ್ಯವಾದ ಒಂದು ಸಾಕು.

ಒಬ್ಬ ಬ್ರಾಹ್ಮಣನು ವಿಶ್ವಾಮಿತ್ರರ ರಾಜಧಾನಿಯಾದ ಕನ್ಯಕುಬ್ಜದಲ್ಲಿ ಸಿಕ್ಕಿದನು. ವಿಶ್ವಾಮಿತ್ರರ ಮಂತ್ರಿಯು ಅವನನ್ನು ಚಾಟಿಗಳಿಂದಲೂ ಮಣಿಗಳಿಂದಲೂ ಸಿಕ್ಕಿದಹಾಗೆ ಹೊಡೆಯಿಸಿ ಕಿವಿಮೂಗುಗಳನ್ನು ಕತ್ತರಿಸಿ ಕಿವಿಯ ರಂಧ್ರಗಳಿಗೆ ಕಾದ ಸೀಸವನ್ನು ಹೊಯಿಸಿದನು ಮತ್ತು ಅನೇಕ ನಾಯಿಗಳನ್ನು ತರಿಸಿ ಅವುಗಳ ಜೊತೆಯಲ್ಲಿ ಇವನನ್ನೂ ಒಂದು ಪಂಜರದಲ್ಲಿ ಕೂಡಿದನು. ಈ ದುಃಖದಿಂದ ಚೀರುತ್ತ ಆ ಬ್ರಾಹ್ಮಣನು ಸಮೀಪಪ್ರಾಂತದಲ್ಲಿ ಪ್ರಸಿದ್ಧತಪಸ್ವಿಗಳಾಗಿದ್ದ ಭರದ್ವಾಜರ ನಾಮಸ್ಮರಣೆಯನ್ನು ಮಾಡಿದನು.

ಭಗವದ್ಭಕ್ತರಾದ ಭರದ್ವಾಜರು ಯಮುನಾನದಿಗೆ ಸ್ವಲ್ಪದೂರದಲ್ಲಿಯೇ ಬಹುಮಂದಿ ಶಿಷ್ಯರೊಡನೆ ಇರುತ್ತಿದ್ದರು. ಅವರು ಪರಶುರಾಮನ ಪಕ್ಷಕ್ಕೂ ಸೇರಿರಲಿಲ್ಲ. ವಸಿಷ್ಠರ ಪಕ್ಷಕ್ಕೂ ಸೇರಿರಲಿಲ್ಲ. ಬ್ರಾಹ್ಮಣರು ಈ ಕಚಾಟಕ್ಕೆಲ್ಲ ದೂರವಾಗಿರಬೇಕೆಂದು ಅವರ ಅಭಿಪ್ರಾಯ. ಒಂದು ಕುಟುಂಬದ ಪುರೋಹಿತರಾಗಿರುವದಕ್ಕೆ ಕೂಡ ಅವರಿಗೆ ಇಷ್ಟವಿರಲಿಲ್ಲ ಮತ್ತು ಅವರಿಗೆ ಯಾರ ಮೇಲೆಯೂ ಹಗೆತನವೂ ಇರಲಿಲ್ಲ. ಅವರು ಅಷ್ಟು ಒಳ್ಳೆಯವರಾಗಿದ್ದದ್ದರಿಂದ ಎಲ್ಲರೂ ಅವರನ್ನು ಪ್ರೀತಿಸುತ್ತಿದ್ದರು.

ಆದರೂ ದುಃಖವನ್ನು ತಡೆಯಲಾರದೆ ಹೊಡೆದುಕೊಳ್ಳುತ್ತ ಸಾಯಲಾಗಿದ್ದ ಬ್ರಾಹ್ಮಣನ ಮುಖದಿಂದ 'ಭರದ್ವಾಜರೆ' ಎಂಬ ಹೆಸರು ಬಂದದ್ದನ್ನು ಕೇಳಿ ಆ ಮಂತ್ರಿಯು ಅವನು ಭರದ್ವಾಜರ ಗೂಢಚಾರನೆಂದೂಹಿಸಿ ಇನ್ನೂ ಹೆಚ್ಚಿನ ಹಿಂಸೆಗಳನ್ನು ಮಾಡಿ ಅವನನ್ನು ಕೊಂದು ಬಿಟ್ಟನು. ಆಮೇಲೆ ಅವನು ಅಷ್ಟೇ ಸಾಲದೆ ಇಪ್ಪತ್ತು ಕಳ್ಳರ ಕೂಟಗಳನ್ನು ಒಟ್ಟುಗೂಡಿಸಿ ಮರುದಿನ ಭರದ್ವಾಜರ ಆಶ್ರಮಕ್ಕೆ ಮುತ್ತಿಗೆಯನ್ನು ಹಾಕಿ ಬೆಂಕಿಯನ್ನು ಹಚ್ಚಿಸಿದನು. ಭರದ್ವಾಜರೂ

ಮತ್ತು ಅವರ ಶಿಷ್ಯರೂ ಮಾತ್ರ ತಮ್ಮ ಅಮಾನುಷವಾದ ಯೋಗ ಶಕ್ತಿಯಿಂದ ಉಳಿದುಕೊಂಡರು. ಕೋಟ್ಯಂತರ ಪ್ರಾಣಿಗಳಿಗೆ ಆವಾಸ ಸ್ಥಾನವಾಗಿದ್ದ ಆ ಪ್ರದೇಶವೆಲ್ಲ ಒಂದೇ ದಿವಸದಲ್ಲಿ ಮರುಭೂಮಿ ಯಾಯಿತು.

## ಮತ್ತೆ ಸಮಾಧಾನ

ಇತ್ತ ಸರಸ್ವತೀದೇವಿಯು ಆಶೀರ್ವಾದವನ್ನು ಮಾಡಿ ಕೊಟ್ಟ ವೀಣೆ ಯನ್ನು ಹಿಡಿದು ಗಾನದ ಮಾಧುರ್ಯದಲ್ಲಿ ಅಭಿರುಚಿಯುಳ್ಳ ವಾಲ್ಮೀ ಕಿಯು ಹಿಮಾಲಯದ ಕಾಡುಗಳನ್ನು ಬಿಟ್ಟು ಮನುಷ್ಯರ ವಾಸಸ್ಥಾನ ಗಳ ಕಡೆಗೆ ಬಂದನು. ಅಲ್ಲಿಯ ಭಯಂಕರವಾದ ಸ್ಥಿತಿಗತಿಗಳನ್ನು ನೋಡಿ ಅವನ ಮನಸ್ಸು ಕರಗಿತು. ಅವನು ಗಟ್ಟಿಯಾಗಿ ಅಳುವದಕ್ಕೆ ಮೊದಲುಮಾಡಿದನು. ಮನುಷ್ಯರ ದುಃಖವನ್ನು ನೋಡಿ ಅವನ ಕಣ್ಣು ಗಳಿಂದ ನೀರು ಬರುವದಕ್ಕೆ ಇದೇ ಮೊದಲು. ಹೀಗೆ ಕಣ್ಣೀರು ಹಾಕುವವರು ಎಷ್ಟು ಜನರು ಸಿಕ್ಕುವರು? ಆ ಕಣ್ಣೀರಿನ ಪ್ರತಿ ಯೊಂದು ತೊಟ್ಟೂ ಒಂದೊಂದು ಅಮೂಲ್ಯವಾದ ರತ್ನ. ಆ ಪ್ರತಿ ಯೊಂದು ಹನಿಯೂ ಸಾವಿರಾರು ಕ್ರೂರಕೃತ್ಯಗಳನ್ನು ಅಡಗಿಸುವದು.

ಹೀಗೆ ಅಳುತ್ತ ಮತ್ತು ಹಾಡುತ್ತ ವಾಲ್ಮೀಕಿಯು ಹಿಂದುಸ್ಥಾನ ವನ್ನೆಲ್ಲ ಸುತ್ತಿದನು. ಎಲ್ಲೆಲ್ಲಿಯೂ ಅರಾಜಕತೆಯ ಗದ್ದಲ. ಆ ದುಃಖ ವನ್ನು ಕಳೆದುಕೊಳ್ಳುವದು ಹೇಗೆಂಬುದು ಅವನಿಗೆ ಇನ್ನೂ ತಿಳಿಯ ಲಿಲ್ಲ. ಸುಮ್ಮನಿರುವದಕ್ಕೆ ಮನಸ್ಸು ಬಾರದು. ಹೀಗಿರುವಾಗ ಒಂದು ದಿನ ಒಂದು ಹಳ್ಳದ ದಡದ ಮೇಲೆ ವೀಣೆಯನ್ನು ನುಡಿಸುತ್ತ ಕುಳಿತಿ ರುವಾಗ ದೂರದಿಂದ ಒಂದು ಭಯಂಕರವಾದ ಶಬ್ದವು ಬಂದು ಅವನ ಕಿವಿಗಳನ್ನು ತುಂಬಿತು. ಮೊದಲು ಅದು ಸುಲಿಗೆಯನ್ನು ಮಾಡುವ ಕಳ್ಳರ ಗುಂಪಿನ ಬೊಬ್ಬಾಟದ ಹಾಗೆ ಕೇಳಿಸಿತು. ಆಮೇಲೆ ಗೋಳಾ ಟದ ಮತ್ತು ಹಂಬಲಿಕೆಯ ಸದ್ದಾಯಿತು. ವಾಲ್ಮೀಕಿಗೆ ಇನ್ನು ತಡೆ ಯುವದಕ್ಕಾಗಲಿಲ್ಲ. ಆಗ ಅವನು ಆ ಶಬ್ದದ ದಾರಿಯನ್ನು ಹಿಡಿದು

ಓಡಿದನು. ಬಹುದೂರದಲ್ಲಿ ಕೆಲವರು ಒಂದು ದೊಡ್ಡ ಪಟ್ಟಣವನ್ನು ಕೊಳ್ಳೆಹೊಡೆಯುತ್ತಿರುವದು ಅವನ ಕಣ್ಣಿಗೆ ಬಿತ್ತು. ಎಲ್ಲೆಲ್ಲಿಯೂ ಹಾಹಾಕಾರ! ಅವನ ಕಣ್ಣುಗಳಿಂದ ಕಣ್ಣೀರಿನ ಕೋಡಿ ಹರಿಯಿತು. ಒಡನೆ ಅವನು ವೀಣೆಯೊಡನೆ ಬಂದು ಆ ಕಳ್ಳರ ಗುಂಪಿನ ನಾಯಕನ ಕೈಹಿಡಿದು— 'ಈ ಕೆಲಸವನ್ನು ನಿಲ್ಲಿಸು'—ಎಂದು ಬೇಡಿಕೊಂಡನು.

ಇತರರ ಹಿತಕ್ಕಾಗಿ ದುಃಖಿಸುವದು ಯಾವಾಗಲೂ ಬಹುಮಟ್ಟಿಗೆ ಕಾರ್ಯಕಾರಿಯಾಗುವದು. ಇಂಥ ದುಃಖವನ್ನು ನೀವು ಒಂದು ಸಲ ವಾದರೂ ತೋರಿಸಿ ನೋಡಿರಿ. ಎಲ್ಲರೂ ನಿಮ್ಮ ಜೊತೆಗೆ ಸೇರಿಕೊಳ್ಳು ವರು. ಹಾಗೆ ದುಃಖವನ್ನು ತೋರಿಸುವ ಸಂದರ್ಭದಲ್ಲಿ ನಿಮ್ಮ ಮನಸ್ಸು ಪ್ರಾಮಾಣಿಕವಾಗಿದ್ದರೆ ಮತ್ತು ಆ ದುಃಖವನ್ನು ನೀವು ಪ್ರಬಲ ವಾಗಿ ಅನುಭವಿಸುತ್ತಿದ್ದರೆ ನಿಮಗೆ ದೊರೆಯುವ ಸಹಾನುಭೂತಿಯು ಇನ್ನೂ ಹೆಚ್ಚಾಗಿರುವದು. ವಾಲ್ಮೀಕಿಯ ಹಾಡುಗಾರಿಕೆ, ನಡತೆ ಮತ್ತು ಗೋಳಾಟಗಳು ಆ ಕಳ್ಳರ ಗುಂಪಿನ ನಾಯಕನ ಮನಸ್ಸನ್ನು ಸ್ವಲ್ಪಮಟ್ಟಿಗೆ ಕರಗಿಸಿದವು. ಆ ಹಾಡುಗಾರನು ತಮಗೆ ಮೊದಲು ನಾಯಕನಾಗಿದ್ದ ವಾಲ್ಮೀಕಿಯೆಂದು ಆಗ ಅವನಿಗೆ ತಿಳಿಯಿತು. ಅವನು ಒಡನೆಯೇ ಆ ಕೊಳ್ಳೆಯನ್ನು ನಿಲ್ಲಿಸುವಂತೆ ತನ್ನವರಿಗೆ ಅಪ್ಪಣೆಯನ್ನು ಮಾಡಿದನು. ಅವನ ಗುಂಪು ಬಹುಮಟ್ಟಿಗೆ ಸುಮ್ಮನಾಯಿತು. ಆದರೂ ಆ ಗುಂಪಿನಲ್ಲಿದ್ದ ಮ್ಲೇಚ್ಛರು, ಯವನರು, ವಾನರರು ಮತ್ತು ರಾಕ್ಷಸರು ಮಾತ್ರ ಇನ್ನೂ ಕೈ ನಿಲ್ಲಿಸಲಿಲ್ಲ. ಇದನ್ನು ಕಂಡು ಅವರ ನಾಯಕನೇ ಅವರ ಬಳಿಗೆ ಹೋಗಿ ಅವರನ್ನು ತಡೆದನು. ಆದರೆ ಅಷ್ಟರೊಳಗೆ ರಾಕ್ಷಸರಾಗಲೆ ರಾಜಕುಟುಂಬದವರನ್ನೆಲ್ಲ ಭಕ್ಷಿಸಿ ಬಿಟ್ಟಿದ್ದರು. ಇನ್ನಾದರೂ ಕೈನಿಲ್ಲಿಸಿರೆಂದು ವಾಲ್ಮೀಕಿಯು ಬಂದು ಅವರನ್ನು ಕೇಳಿಕೊಂಡನು. ಅವರು ಸ್ವಭಾವದಿಂದಲೇ ನರಭಕ್ಷಕರು. ಇದರ ಮೇಲೆ ಮದ್ಯಪಾನ! ಮತ್ತು ಕೊಳ್ಳೆ!! ಅವರು ವಾಲ್ಮೀ ಕಿಯ ಮಾತನ್ನು ಕೇಳುವ ಸಂಭವವೆಲ್ಲಿ? ಅವರ ಕಾಮಕ್ರೋಧಾದಿ ಗಳು ಕೈಮೀರಿದ್ದವು. ಆಗ ಕಳ್ಳರ ನಾಯಕನು ಆ ಧೂರ್ತರನ್ನೆಲ್ಲ

ಬಲಾತ್ಕಾರದಿಂದ ದೂರಕ್ಕೆ ಓಡಿಸಿದನು. ಆಗ ಅವರೆಲ್ಲರೂ ಗುಂಪು ಕಟ್ಟಿಕೊಂಡು ಹಿಂದಿರುಗಿ ಬಂದು ಆ ನಾಯಕನಿಗೇ ಮುತ್ತಿಗೆಯನ್ನು ಹಾಕಿದರು. ಈ ಸಂದರ್ಭದಲ್ಲಿ ಆ ನಾಯಕನು ತನ್ನ ಮನೆಯನ್ನು ಸೇರುವದೇ ಕಷ್ಟವಾಯಿತು.

ಆ ಕಳ್ಳರ ಯಜಮಾನನು ನೋಡಿದಾಗ ವಾಲ್ಮೀಕಿಯು ವೀಣೆಯನ್ನು ನುಡಿಸುತ್ತ ಋಭುಗಳು ಹಾಡಿದ ಹಾಡನ್ನು ಹಾಡುತ್ತಿದ್ದಾನೆ. ಕಳ್ಳರೆಲ್ಲರೂ ಕಣ್ಣೀರು ಸುರಿಸುತ್ತಿದ್ದಾರೆ. ಸಾವಿರಾರು ಯೋಧರು ಮನಸ್ಸಿನಲ್ಲಿ ನೊಂದುಕೊಂಡು ದುಃಖಿಸುತ್ತಿದ್ದಾರೆ. ಯಾರಿಗೆ ಜನರನ್ನು ಕೊಂದು ಜೀವಿಸುವದೇ ಮುಖ್ಯವೃತ್ತಿಯಾಗಿತ್ತೊ ಅವರೆಲ್ಲರೂ ಆಯುಧಗಳನ್ನು ಬಿಸಾಟು ಗೋಳಾಡುವದಕ್ಕೆ ಮೊದಲುಮಾಡಿದ್ದಾರೆ. ಮೇಲೇರಿ ಬಂದ ರಾಕ್ಷಸರ ಕಡೆಗೆ ಲಕ್ಷ್ಯವೇ ಇಲ್ಲ. ಒಕ್ಕಟ್ಟಾಗಿ ಬಂದ ರಾಕ್ಷಸರ ಗುಂಪಿನ ಮುತ್ತಿಗೆ ಬಲವಾಗುತ್ತ ಬಂದಷ್ಟು ವಾಲ್ಮೀಕಿಯ ಹಾಡಿನ ಝುರಿಯು ಉಬ್ಬುತ್ತ ಬಂದು ಅತ್ಯಂತವಾಗಿ ಮರುಕವನ್ನು ಹುಟ್ಟಿಸುವಂತೆ ಮನುಷ್ಯರ ದುಃಖಸ್ವರೂಪವನ್ನು ತೋರಿಸಿತು. ಅದು ಪ್ರತಿಯೊಬ್ಬ ರಾಕ್ಷಸನ ತಲೆಯೊಳಕ್ಕೂ ತೂರಿಕೊಂಡಿತು. ಅದರ ಆವೇಶಕ್ಕೆ ಬೆರಗಾಗಿ ರಾಕ್ಷಸರು ಕೂಡ ಅದಕ್ಕೆ ಕಿವಿಗೊಡುವದಕ್ಕೆ ಮೊದಲುಮಾಡಿದರು. ವಾಲ್ಮೀಕಿಯು ಋಭುಗಳ ಹಾಡನ್ನು ಕೇಳಿದಾಗ ಏನುಗತಿಯಾದನೊ ಕಳ್ಳರೆಲ್ಲರೂ ವಾಲ್ಮೀಕಿಯ ಹಾಡನ್ನು ಕೇಳಿ ಆ ಗತಿಯಾದರು. ಯವನನೂ ಮ್ಲೇಚ್ಛನೂ ರಾಕ್ಷಸನೂ ವಾನರನೂ ಪ್ರತಿಯೊಬ್ಬನೂ ಅದಕ್ಕೆ ಪರವಶನಾದನು. ಪ್ರತಿಯೊಬ್ಬನ ಮನಸ್ಸೂ ಕರಗಿ ನೀರಾಯಿತು.

ಆ ಹಾಡು ಯಾವದೆಂದರೆ:—

**ಧನಾಸರಿ ಛಾಪು.**

(ಕರುಣಾಕರ ನೀನೆಂಬುವದೇಕೊ—ಎಂಬಂತೆ)

ಒಡಹುಟ್ಟಿದವರೆ, ಒಡನಾಡುವವರೆ, ಒಡಗೂಡಿರುವವರೆ, ॥ ಪ ॥

ಬಿಡಿರಿ ಬಿಡಿರಿ ನಿಮ್ಮೊಳಗೊಳಜಗಳವ। ಪಡೆಯುವಿರೈಕ್ಯದಿಂದಲಿ ಬಹುಭಾಗ್ಯವ ॥ಅ.ಪ॥

ಎಲ್ಲಿಯು ನಡತೆಯಿದೆಲ್ಲರು ಬೇರೆಬೇರೆ । ತಲ್ಲಣಗೊಳಬಹುದೆ? ॥
ಎಲ್ಲರು ದೇವರ ಮಕ್ಕಳಾಗಿರೆ ಭೇದ । ವಿಲ್ಲದೆ ಬಾಂಧವಪ್ರೇಮವ ತೋರದೆ ॥ ೧ ॥
ನಿಲ್ಲಿರಿ, ನಿಲ್ಲಿರಿ; ಆದುದಾಯಿತು; । ಹೊಲ್ಲೆ ಹಸುವಿದ ನೋಡಿ; ॥
ಬಲ್ಲವರೆನಿಸಿಕೊಂಡಿರಬೇಕಾದರೆ । ಕಲ್ಲೆದೆಯವರೆಂದೆನಿಸಿರಬೇಡಿ ॥ ೨ ॥
ಒಂದೇ ಮಾನುಷಜಾತಿಯಲ್ಲವೆ? । ಒಂದೇ ರಚನೆಯೊಳಿಲ್ಲವೆ? ॥
ಮಂದಿಯ ಮನಸನು ನೋಯಿಸೆ ತನಗದು।ಹಿಂದಿರುಗುವದೆಂದರಿಯ ಬೇಡವೇ?॥ ೩ ॥
ಇತರರು ನಿಮ್ಮನು ನೋಯಿಸಲಾಗಳೆ । ಖತಿಗೊಳ್ಳುವಿರಲ್ತೆ ॥
ಇತರರ ನೋಯಿಸುವಾಗ ನಿಮ್ಮಯ । ಮತಿಗದು ನೆನಪಾಗದೆ ಇಹುದೊಳಿತೆ? ॥ ೪ ॥

ಈ ಹಾಡನ್ನು ಕೇಳಿದವರೆಲ್ಲರೂ ಗಟ್ಟಿಯಾಗಿ ಗೊಳೋ ಎಂದು ಅಳುತ್ತ ದುಃಖದ ಆವೇಶದಿಂದ ನೆಲದ ಮೇಲೆ ಉರುಳುತ್ತ "ಹೇಳಪ್ಪ, ಹೇಳು; ನಮ್ಮ ದೊರೆಯೇ, ಏನುಮಾಡಬೇಕು ಹೇಳು" ಎಂದು ಹಲುಬಿದರು.

ಆಗ ಅದೇ ಹಾಡು ಮುಂದೆ ಸಾಗಿದುದೆಂತೆಂದರೆ:—

ಒಡಹುಟ್ಟಿದವರೆ ಎಂದೆಲ್ಲರನು । ಬಿಡದೆ ಕರೆಯಿರಿನ್ನು; ॥
ಪೊಡವಿಯೊಳಾರನೂ ಹೊರಗುಮಾಡದಿರಿ;।ಕಡುಮಮತೆಯ ಮಾಡಿರಿ ತಿಳಿದಿದನು ॥೫॥
ನಿಮ್ಮಂತೆಯೆ ಚಳಿಯಿತರರಿಗಪ್ಪುದು; । ನಿಮ್ಮಂತೆಯೆ ಸೆಕೆಯಿತರರಿಗೆ; ॥
ನಿಮ್ಮಂತೆ ಸುಖದುಃಖವೆಲ್ಲರಿಗೆ; । ನಿಮ್ಮಂತೆಯೆ ಸರ್ವವು ಸರ್ವರಿಗೆ ॥೬॥
ಒಂದೇ ಭೂಮಿಯು ನಿವ್ಮಾವಾಸವು; । ಒಂದೇ ಸೂರ್ಯನಿಂದಲಿ ಬೆಳಕು; ॥
ಒಂದೇ ಚಂದ್ರನಾನಂದವು ನಿಮಗೆಲ್ಲ; । ಒಂದಾಗಿರದಂದವು ಸಾಕುಸಾಕು! ॥೭॥

ಆ ಹಾಡು ಇನ್ನೇನನ್ನು ಹಾಡಿತೋ ಗೊತ್ತಿಲ್ಲ. ಎಷ್ಟು ಹೊತ್ತು ಹಾಡಿತೊ ಯಾರು ಬಲ್ಲರು !

ಈ ಹಾಡನ್ನು ಕೇಳಿ ಪ್ರತಿಯೊಬ್ಬನೂ ತನ್ನ ಕಳ್ಳತನದ ವೇಷದ ಉಡಿಗೆತೊಡಿಗೆಗಳನ್ನೆಲ್ಲ ಒಂದು ಮೂಲೆಗೆ ಒಗೆದುಬಿಟ್ಟನು. ಎಲ್ಲರೂ ವಾಲ್ಮೀಕಿಯ ಕಾಲಿಗೆ ಬಿದ್ದರು. ಆ ಕಳ್ಳರ ಗುಂಪಿನ ಮುಖಂಡನಾದ ಗುಹಕನೂ ಅಳುತ್ತ ಶರಣುಹೊಕ್ಕನು. ವಾಲ್ಮೀಕಿಯು ತನ್ನ ಕಾಲನ್ನು ಮುಟ್ಟಬೇಡಿರೆಂದು ಅವರನ್ನು ತಡೆದು—"ನಾನು ದೇವರಲ್ಲ; ಅವತಾರಪುರುಷನಲ್ಲ; ರಾಜನು ಕೂಡ ಅಲ್ಲ. ನೀವೆಲ್ಲರೂ

ಇರುವ ಹಾಗೆಯೇ ನಾನೊಬ್ಬನು. ನನ್ನ ಕಾಲಿಗೆ ಬೀಳುವದರಿಂದ ಪ್ರಯೋಜನವಿಲ್ಲ. ಈಗ ಆದುದಾಯಿತು. ಇನ್ನು ಹಾಗೆ ಮಾಡ ಬೇಡಿ. ನಿಮ್ಮ ವೃತ್ತಿಯನ್ನು ಬದಲಾಯಿಸಿರಿ; ಸರಿಯಾದ ದಾರಿ ಯಲ್ಲಿ ನಡೆಯಿರಿ; ನಿಮಗೆ ಸುಖವಾಗುವದು.'' ಎಂದು ಹೇಳಿದನು.

ವಾಲ್ಮೀಕಿಯು ಹೀಗೆ ಎಲ್ಲರಿಗೂ ಬುದ್ಧಿವಾದವನ್ನು ಹೇಳು ತ್ತಿರುವಾಗ ಪಟ್ಟಣದಲ್ಲಿ ಅಳಿದುಳಿದ ಜನರು ಇತ್ತ ಸಾಲಿಟ್ಟು ಬರ ತೊಡಗಿದರು. ಕೆಲವರಿಗೆ ಕಣ್ಣು ಹೋಗಿದೆ; ಕೆಲವರಿಗೆ ಕಾಲು ಮುರಿದಿದೆ; ಕೆಲವರಿಗೆ ಮೈಮೇಲೆ ಸುಟ್ಟ ಗುಳ್ಳೆಗಳೆದ್ದಿವೆ; ಕೆಲವರು ಮುದುಕರಾದ ತಂದೆತಾಯಿಗಳನ್ನು ಹಿಡಿದುಕೊಂಡಿದ್ದಾರೆ; ಇನ್ನು ಕೆಲವರು ಗಾಯವಾಗಿ ಸಾಯಲಾಗಿರುವ ಮಕ್ಕಳನ್ನು ಎದೆಗೆ ಅವಚಿ ಕೊಂಡಿದ್ದಾರೆ. ನರಭಕ್ಷಕರಾದ ರಾಕ್ಷಸರು ತಮ್ಮ ರಾಜನ ಕು ಟುಂಬದವರನ್ನೆಲ್ಲ ತಿಂದುಹಾಕಿದರೆಂದು ಅವರಿಗೆ ಗೊತ್ತಿತ್ತು. ಆದ್ದ ರಿಂದ ಇನ್ನು ಅರಾಜಕವಾದ ಆ ಸ್ಥಳದಲ್ಲಿರುವದು ಅಪಾಯಕರವೆಂದು ಯೋಚಿಸಿ ಪ್ರತಿಯೊಬ್ಬನೂ ತನ್ನ ಬಂಧುಗಳಾಗಲಿ ಸ್ನೇಹಿತರಾಗಲಿ ಇರುವ ಯಾವ ಕಡೆಗಾದರೂ ಹೋಗುವ ಪ್ರಯತ್ನದಲ್ಲಿದ್ದನು. ವಾಲ್ಮೀಕಿಯು ಅತ್ತಕಡೆ ತೋರಿಸಿ ಕಳ್ಳರ ಗುಂಪನ್ನು ಕುರಿತು— ''ನೋಡಿರಿ, ನಿಮ್ಮ ಯಶಶ್ಶರೀರದ ನೆನಪಿನ ಗುರ್ತಾಗಿರುವ ಈ ನೋಟ ವನ್ನು ನೋಡಿರಿ''—ಎಂದು ಹೇಳಹೇಳುತ್ತಲೇ ಸುರಿಸಿದ ಕಣ್ಣೀರು ಅವನ ಎದೆಯ ಮೇಲೆ ಬಿದ್ದು ಕೆಳಕ್ಕೆ ಹರಿದುಹೋಯಿತು. ಎಲ್ಲರೂ ತಮ್ಮ ತಮ್ಮ ಪಾಪಕೃತ್ಯದ ಮಹತ್ತ್ವವನ್ನು ಮನಗಂಡು ಪಶ್ಚಾ ತ್ತಾಪವನ್ನು ಹೊಂದಿ ಹೆಣದಂತೆ ಮುಖವನ್ನು ಜೋಲುಹಾಕಿದರು. ಆಗ ವಾಲ್ಮೀಕಿಯು ಅವರನ್ನು ಕುರಿತು—''ಹೋಗಿ; ಆ ನಗರವಾಸಿಗ ಳನ್ನು ಹಿಂದಕ್ಕೆ ಕರೆದುಕೊಂಡು ಬನ್ನಿ ''—ಎಂದು ಹೇಳಿದನು.

ಅದರಂತೆ ಕಳ್ಳರ ಗುಂಪಿನವರು ಅವರ ಕಡೆಗೆ ಹೊರಡುತ್ತಲೇ ಆ ನಗರವಾಸಿಗಳು ದಿಗಿಲುಬಿದ್ದು ಓಡುವದಕ್ಕೆ ಕಾಲ್ದೆಗೆದರು. ದುಷ್ಟರು ನಿಜವನ್ನು ಆಡಿದರೂ ಕೂಡ ಅದು ನಂಬಿಕೆಗೆ ಅರ್ಹವಾ

ಗುವದಿಲ್ಲವೆಂದು ಆ ಕಳ್ಳರಿಗೆ ಗೊತ್ತಾಯಿತು. ಅವರು ವಾಲ್ಮೀಕಿಯನ್ನು ಕುರಿತು—"ಆ ಪುರವಾಸಿಗಳು ಹಿಂದಕ್ಕೆ ಬರುವಂತೆ ನೀನೇ ಮಾಡಬೇಕು"—ಎಂದು ಕೇಳಿಕೊಂಡರು. ವಾಲ್ಮೀಕಿಯಾದರೂ ಕಳ್ಳನಲ್ಲವೆಂದು ಪುರವಾಸಿಗಳು ತಿಳಿಯುವದು ಹೇಗೆ?

ಅಂತು ವಾಲ್ಮೀಕಿಯು ಹೋಗಿ ತನ್ನ ನಯವಾದ ಮಾತಿನಿಂದ ಅವರನ್ನೆಲ್ಲ ಹಿಂದಕ್ಕೆ ಕರೆದುಕೊಂಡು ಬಂದನು. ವಾಲ್ಮೀಕಿಯ ನಡೆನುಡಿಗಳು ಆ ಪುರವಾಸಿಗಳ ಮನಸ್ಸನ್ನು ಸೂರೆಗೊಂಡವು. ಕೇಳುವವರೇ ದಿಕ್ಕಿಲ್ಲದ ಕಡೆಯಲ್ಲಿ ವಾಸಮಾಡುವದು ಸರಿಯಲ್ಲವೆಂದು ಆ ಪುರವಾಸಿಗಳು ವಾಲ್ಮೀಕಿಯನ್ನು ಕುರಿತು—"ನೀನೇ ನಮ್ಮ ಅರಸಾಗಿರು"—ಎಂದು ಸೆರಗೊಡ್ಡಿ ಬೇಡಿಕೊಂಡರು. ಎಲ್ಲವನ್ನೂ ಬಿಟ್ಟು ವಾಲ್ಮೀಕಿಗೆ ಅರಸುತನವೇಕೆ ಬೇಕಾದೀತು! ವಾಲ್ಮೀಕಿಯು ಅದಕ್ಕೆ ಒಪ್ಪದೆ ಆ ಪುರವಾಸಿಗಳನ್ನು ಒಡಂಬಡಿಸಿ ಆ ಕಳ್ಳರ ಗುಂಪಿನ ಮುಖಂಡನಾದ ಗುಹಕನಿಗೆ ಆ ಪ್ರದೇಶದ ಅರಸುತನವನ್ನು ಕೊಟ್ಟು ಪಟ್ಟಾಭಿಷೇಕ ಮಾಡಿದನು. ಗುಹಕನ ಆಧಿಪತ್ಯದಲ್ಲಿ ಮ್ಲೇಚ್ಛರೂ, ಯವನರೂ, ವಾನರರೂ ಮತ್ತು ರಾಕ್ಷಸರೂ ಎಲ್ಲರೂ ಒಕ್ಕಟ್ಟಾಗಿ ವಾಸಕ್ಕೆ ನಿಂತರು. ಸುಲಿಗೆಯ ಮೇಲಣ ಅಪೇಕ್ಷೆಯು ಅವರಿಗೆ ಸಂಪೂರ್ಣವಾಗಿ ನಂದಿಹೋಯಿತು. ಹೀಗೆ ಒಂದು ರೀತಿಯಿಂದ ರಾಜ್ಯದಲ್ಲಿ ಶಾಂತಿಯು ನೆಲೆಗೊಂಡಿತು.

ಆದರೆ ಅದು ಬಹುಕಾಲ ಹೀಗೆಯೇ ನಡೆಯುವ ವಿಷಯದಲ್ಲಿಯೂ ಅಷ್ಟು ಹೆಚ್ಚು ಜನ ಕಳ್ಳರು ಐಕಮತ್ಯದಿಂದಿರುವ ವಿಷಯದಲ್ಲಿಯೂ ವಾಲ್ಮೀಕಿಯ ಮನಸ್ಸಿನಲ್ಲಿ ಸ್ವಲ್ಪ ಸಂಶಯವಿತ್ತು. ಅವನು ತಿಂಗಳಿಗೊಂದುಸಲ ಗುಹಕನನ್ನು ನೋಡುವದಕ್ಕೆ ಬರುತ್ತ ಉಳಿದ ಕಾಲದಲ್ಲೆಲ್ಲ ತನ್ನ ಮನಸ್ಸಿಗೆ ಬಂದಂತೆ ತನ್ನ ಮೆಚ್ಚಿನ ಹಾಡನ್ನು ಪ್ರಪಂಚದಲ್ಲೆಲ್ಲ ಹಾಡಿಕೊಂಡು ತಿರುಗುತ್ತ ಇದ್ದನು.



# ಆರನೆ ಸನ್ನಾಹ



## ಪಟ್ಟಣದ ಹಾರಿಕೆ

ವಿಶ್ವಾಮಿತ್ರರು ತಮ್ಮ ಸೃಷ್ಟಿಯಲ್ಲಿ ಸ್ವಂತಸಂತತಿಯನ್ನು ಕಾಪಾಡುವಂತೆ ಜನರನ್ನು ಎಡೆಬಿಡದೆ ಸಾಹಸದಿಂದ ಕಾಪಾಡಿದರು. ತಮ್ಮ ಪ್ರಜೆಗಳಿಗೆ ಅನುಕೂಲತೆಗಳನ್ನು ಕಲ್ಪಿಸುವ ಪ್ರಯತ್ನದಲ್ಲಿಯೂ ಅವರ ಜೀವಮಾನಾವಧಿ ಅವರಿಗೆ ಸಂತೋಷವಿರುವದೆಂಬ ನಂಬಿಕೆಯನ್ನು ಭದ್ರಪಡಿಸುವ ಸಂದರ್ಭದಲ್ಲಿಯೂ ತಮ್ಮ ಪ್ರಾಣವೇ ಹೋಗುವದೆಂದರೂ ಅಲಕ್ಷ್ಯಮಾಡುತ್ತಿರಲಿಲ್ಲ. ಆದರೆ ಇದರಿಂದ ಅವರ ಸ್ವಂತಕ್ಕೇನಾಯಿತು? ಆ ಕೆಲಸದ ಸಂಭ್ರಮದಲ್ಲಿರುವವರೆಗೂ ಅವರಿಗೆ ತಮ್ಮ ಸ್ವವಿಷಯವನ್ನು ಬೇರೆ ಯೋಚಿಸುವ ಅವಕಾಶವೇ ಇರಲಿಲ್ಲ. ಅವರು ತಮ್ಮ ಸೃಷ್ಟಿಗೆಲ್ಲ ತಾವೇ ಚಕ್ರಾಧೀಶ್ವರರಾಗಿದ್ದರು.

ಒಬ್ಬ ಸಾಮಾನ್ಯಮನುಷ್ಯನಿಗೆ ಯಾರೂ ಜೊತೆ ಇರದಿದ್ದರೆ ಎಷ್ಟೋ ಬೇಸರವಾಗುವದಿಲ್ಲವೆ? ಇದರ ಅನುಭವವು ವಿಶ್ವಾಮಿತ್ರರಿಗೂ ಬಂತು. ಅವರು ತಮ್ಮ ಹೊಸಸೃಷ್ಟಿಯ ಜನರೊಡನೆಯೇ ಸೇರಬೇಕಾಯಿತು. ಅಯ್ಯೋ, ಅವರು ಯಾರೊಡನೆ ತಮ್ಮ ಜೀವಮಾನದ ಬಹುಭಾಗವನ್ನು ಕಳೆದರೊ ಮತ್ತು ಯಾರು ತಮ್ಮ ಸುಖದುಃಖಗಳನ್ನು ತಿಳಿಯಬಲ್ಲರೊ ಆ ಜನರೆಲ್ಲಿ? ಆ ಹೊಸ ಪ್ರಪಂಚದ ಜನರು ಸುಖಿಗಳಾಗಿದ್ದರೆಂಬುದು ನಿಜ. ಆದರೆ ವಿಶ್ವಾಮಿತ್ರರು ಭೂಲೋಕದವರಾದ್ದರಿಂದ ದುಃಖಾನುಭವವನ್ನು ಮಾಡುವದು ಅವರ ಹಣೆಯಲ್ಲಿ ಬರೆದಿತ್ತು. ಅವರಿಗೇನಾದರೂ ವ್ಯಸನವುಂಟಾದರೆ ಅವರನ್ನು ಸಂತಯಿಸಬಲ್ಲ ಮನುಷ್ಯರೆಲ್ಲಿ? ಹೀಗಾಗಿ ಅವರ ಸಂಕಟವು ಬಹಳವಾಯಿತು.

ಕೊನೆಗೆ ಅವರು ತಮ್ಮ ಹಳೇಪ್ರಪಂಚದ ಕೆಲವು ಜನರನ್ನು ಹೊಸಪ್ರಪಂಚಕ್ಕೆ ತರಬೇಕೆಂದು ಅಪೇಕ್ಷಿಸಿದರು. ಈ ಉದ್ದೇಶದಿಂದ

ಅವರು ಕನ್ಯಕುಬ್ಜವನ್ನೇ ಹಿಡಿಸುವಷ್ಟು ಒಂದು ದೊಡ್ಡ ನಗರವನ್ನು ನಿರ್ಮಿಸಿದರು. ಹೊಸ ಸೃಷ್ಟಿಯಲ್ಲಿ ಶತ್ರುಗಳ ಭಯವೇನೂ ಇಲ್ಲದ್ದರಿಂದ ಅಲ್ಲಿ ಊರ ಸುತ್ತ ಕೋಟೆಕೊತ್ತಳಗಳೇನೂ ಇರಲಿಲ್ಲ. ಆ ನಗರದಲ್ಲಿ ಅನುಕೂಲವಾದ ಮನೆಗಳೂ ಘನವಾದ ಅರಮನೆಗಳೂ ತುಂಬಿದ್ದವು. ಇಷ್ಟು ಮಾಡಿ ವಿಶ್ವಾಮಿತ್ರರು ಭೂಲೋಕಕ್ಕೆ ಬಂದು ತಮ್ಮ ಮಂತ್ರಿಗಳಿಗೂ ತಮ್ಮ ಮನೆಯವರಿಗೂ ದರ್ಶನವನ್ನು ಕೊಟ್ಟರು.

ಮನುಷ್ಯನು ಏಕಾಕಿಯಾದರೆ—ಅವನು ಭೂಲೋಕದ ದೇವರೇ ಆಗಲಿ–ಅವನು ಬಂಧುಬಳಗಗಳ ನಡುವೆ ಇರುವವನಷ್ಟು ಸುಖಿಯಲ್ಲವೆಂದು ಅವರಿಗೆ ಆಗ ತಿಳಿಯಿತು. ಒಂದು ಸಲ ಅವರಿಗೆ ಭೂಲೋಕದಲ್ಲಿಯೇ ಇರಬೇಕೆಂದು ತೋರಿತು. ಆಗ ತಾವು ಇಲ್ಲಿ ನಡೆಸಿದ ಅಧಿಕಾರಕ್ಕೂ ಅಲ್ಲಿ ನಡೆಸಿದ ಅಧಿಕಾರಕ್ಕೂ ಹೋಲಿಸಿ ನೋಡಿದರು. ಆಗಲೇ ಭೂಲೋಕದ ಬ್ರಾಹ್ಮಣರ ವಿಚಾರವೂ ನೆನಪಿಗೆ ಬಂತು. ಆಗ ಅವರು ತಮ್ಮ ಜನರನ್ನೆಲ್ಲ ಕರೆದುಕೊಂಡು ಹೊಸ ಪ್ರಪಂಚಕ್ಕೆ ಹೋಗುವ ಯೋಚನೆಯನ್ನು ನಡೆಯಿಸಿದರು.

ಆ ಕನ್ಯಕುಬ್ಜನಗರಕ್ಕೆ ನಗರವೇ ಮೆಲ್ಲಮೆಲ್ಲಗೆ ಮೇಲಕ್ಕೇಳುವದಕ್ಕೆ ಮೊದಲಾಯಿತು. ಈ ಆಶ್ಚರ್ಯಕರವಾದ ನೋಟದಿಂದ ಭೂಲೋಕದ ಜನರೆಲ್ಲರೂ ಬೆರಗಾದರು. ಆ ನಗರವು ಹಾರುತ್ತಿರಲು ಅಲ್ಲಿಯ ಜನರೆಲ್ಲರೂ ಕುಣಿಯುವದಕ್ಕೆ ಮೊದಲುಮಾಡಿದರು. ಅವರ ರಮಣೀಯವಾದ ಗಾನಧ್ವನಿಯು ವಾಯುಮಂಡಲದಲ್ಲೆಲ್ಲ ಹರಡಿಕೊಂಡಿತು. ಆದರೆ ಕೆಲವು ಎತ್ತರದವರೆಗೆ ಸಾಗಿದಮೇಲೆ ಅವರ ಸುಖವು ದುಃಖರೂಪಕ್ಕೆ ತಿರುಗಿತು. ಅವರಿಗೆ ಉಸಿರಾಡುವದಕ್ಕೇ ಆಗದೆ ಹೋಯಿತು. ಅವರ ಗಂಟಲು ಕಟ್ಟಿಕೊಂಡಿತು. ವಿಶ್ವಾಮಿತ್ರರು ಭೂಮಂಡಲದ ವಾಯುವನ್ನು ಸೆಳೆಯುವ ಯತ್ನವನ್ನುಮಾಡಿದರು. ಆದರೆ ಅದು ಬರಲಿಲ್ಲ. ಹೀಗೆ ಅವರು ದೊಡ್ಡದೊಂದು ತೊಡಕಿನಲ್ಲಿ ಸಿಕ್ಕಿದರು. ಒಂದು ವಾಯುಮಂಡಲವನ್ನು ಸೃಷ್ಟಿಸಬೇಕೆಂದು ಹೋದರು; ಅದು ಆಗಲಿಲ್ಲ.

ಆಮೇಲೆ ಅವರು ಬ್ರಹ್ಮನಿಗೆ ಮೊರೆಯಿಡಲು ಬ್ರಹ್ಮನು ಬಂದನು. ಆಗ ವಿಶ್ವಾಮಿತ್ರರು ಬ್ರಹ್ಮನನ್ನು ಕುರಿತು—"ನೀನು ಇನ್ನೂ ನನ್ನ ಸಂಗಡ ಜಗಳವಾಡಬೇಕೆಂದಿರುವೆಯೊ? ನಾನು ನನ್ನ ಜನರೊಡನೆ ನನ್ನ ಸೃಷ್ಟಿಗೆ ಹೋಗಬೇಕೆಂದಿದ್ದೇನೆ. ನೀನೇಕೆ ಅಡ್ಡಿಮಾಡುತ್ತೀ?"—ಎಂದು ಕೇಳಿದರು. ಆಗ ಬ್ರಹ್ಮನು—"ನೀನಾಗಲೇ ನಿನ್ನ ಹೊಸಸೃಷ್ಟಿಯನ್ನು ಮಾಡುವದರಲ್ಲಿ ನಿನಗಿದ್ದ ತಪಶ್ಶಕ್ತಿಯನ್ನೆಲ್ಲ ಕಳೆದುಕೊಂಡಿದ್ದಿ. ಇನ್ನೇನು ಮಾಡುವದಕ್ಕೂ ನಿನ್ನ ಕಯ್ಯಲ್ಲಾಗುವದಿಲ್ಲ. ಇನ್ನೇನಾದರೂ ನೀನು ಹೊಸ ಪ್ರಯತ್ನವನ್ನು ಮಾಡಿದರೆ ನಿನ್ನ ಸೃಷ್ಟಿಗೇ ಕೊನೆಗಾಲವು ಬರುವದು. ಆಣೆಮಾಡಿ ಹೇಳುತ್ತೇನೆ. ತಾಳ್ಮೆ ಇರಲಿ ನ್ಯಾಯವನ್ನನುಸರಿಸಿ ನಡೆ"—ಎಂದು ಹೇಳಿದನು. ಆಗ ವಿಶ್ವಾಮಿತ್ರರು—"ನಿನ್ನ ಬಾಯಿ ಎಷ್ಟುದೊಡ್ಡದೊ ಮಾತುಗಳೂ ಅಷ್ಟುದೊಡ್ಡದಾಗಿವೆ. ನೀಚ! ನೀನು ನನಗೆ 'ನ್ಯಾಯವಾಗಿ ನಡೆ' ಎಂದು ಹೇಳುತ್ತೀಯೆ ? ಇಲ್ಲಿ ನೋಡು. ನಾನು ನನ್ನ ಲೋಕದಿಂದಲೇ ಗಾಳಿಯನ್ನು ತಂದು ಇವರನ್ನು ಮೇಲಕ್ಕೆ ತೆಗೆದುಕೊಂಡು ಹೋಗುತ್ತೇನೆ"—ಎಂದು ಹೇಳುತ್ತ ದಡದಡನೆ ತನ್ನ ಹೊಸ ಲೋಕದ ಕಡೆಗೆ ನಡೆದರು.

ಈಗ ಕನ್ಯಕುಬ್ಜ ನಗರವು ದುಡುಮ್ಮನೆ ಬೀಳುವದಕ್ಕೆ ಮೊದಲಾಯಿತು. ತನ್ನ ಸೃಷ್ಟಿಯು ಹಾಗೆ ಹಾಳಾಗುತ್ತಿರುವದನ್ನು ನೋಡಿ ಬ್ರಹ್ಮನು ಅದನ್ನು ನಿದಾನವಾಗಿ ಕೆಳಕ್ಕೆ ಇಳಿಸಿ ಮತ್ತೆ ಅದನ್ನು ಸ್ವಸ್ಥಾನದಲ್ಲಿ ನಿಲ್ಲಿಸಿದನು. ವಿಶ್ವಾಮಿತ್ರರ ಕಡೆಯವರು ರಾಕ್ಷಸರನ್ನು ಕೂಡಿಕೊಂಡು ಬ್ರಾಹ್ಮಣರ ಮೇಲೆ ಬಗೆಬಗೆಯಿಂದ ತಮ್ಮ ಕೈಯನ್ನು ನಡೆಸಿದರು.

## ಸೃಷ್ಟಿಯ ನಾಶ.

ವಿಶ್ವಾಮಿತ್ರರು ತಮ್ಮ ಸೃಷ್ಟಿಯ ವಾತಾವರಣವನ್ನು ಕೆಳಕ್ಕೆ ತರುವ ಯತ್ನವನ್ನು ಮಾಡಿದರು. ಆದರೆ ಆ ಕೆಲಸವು ಅವರಿಂದ ಆಗಲಿಲ್ಲ. ಆ ರೋಷದಿಂದ ವಿಶ್ವಾಮಿತ್ರರು ಮತ್ತೆ ಬ್ರಹ್ಮನನ್ನು ಪ್ರತ್ಯಕ್ಷಮಾಡಿಕೊಂಡು— "ನನ್ನ ವಾತಾವರಣವು ಕೆಳಕ್ಕೆ ಇಳಿ

ಯುವದಕ್ಕೆ ದಾರಿಯನ್ನು ಕೊಡು ''— ಎಂದು ಕೇಳಿದರು. ಆಗ ಬ್ರಹ್ಮನು—''ನಿನ್ನ ತಪಶ್ಶಕ್ತಿಯೆಲ್ಲ ಆಗಲೇ ಹೋಗಿರುವದರಿಂದ ನಿನ್ನ ಇಷ್ಟಾರ್ಥವು ನೆರವೇರಲಾರದು''— ಎಂದುತ್ತರವನ್ನು ಕೊಟ್ಟನು. ಆಗ ಕೋಪದಿಂದ ವಿಶ್ವಾಮಿತ್ರರು ಬ್ರಹ್ಮನನ್ನು ಸೆರೆಯಲ್ಲಿಡುವದಕ್ಕೆ ಹೋದರು. ಅದೂ ಸಾಗಲಿಲ್ಲ; ಮತ್ತಷ್ಟು ರೇಗಿ ತನ್ನ ದೊಣ್ಣೆಯ ನೆತ್ತಿ ಬ್ರಹ್ಮನ ಸೃಷ್ಟಿಯನ್ನೇ ಹಾಳುಮಾಡಿಬಿಡುತ್ತೇನೆಂದು ಮನಸ್ಸುಮಾಡಿದರು. ಬ್ರಹ್ಮನು ತಾನೇ ಸಮಾಧಾನವನ್ನು ತಂದು ಕೊಂಡು — '' ಇಷ್ಟರಲ್ಲಿಯೇ ತೃಪ್ತನಾಗಿರು; ಇನ್ನೇನಾದರೂ ಹೊಸದು ಮಾಡುವದಕ್ಕೆ ಹೋದರೆ ನಿನ್ನ ಸ್ವಂತಸೃಷ್ಟಿಯೇ ಚೂರು ಚೂರಾಗಿ ಹೋಗುವದು''—ಎಂದು ಹೇಳಿದನು.

ವಿಶ್ವಾಮಿತ್ರರು ಬ್ರಹ್ಮನಿಗೆ ಅವಮಾನಕರವಾದ ಮಾತುಗಳನ್ನಾಡಿ ಅವನನ್ನು ಹಿಂದಕ್ಕೆ ಕಳುಹಿಸಿಬಿಟ್ಟು ಆಮೇಲೆ ದೊಣ್ಣೆಯನ್ನು ಎತ್ತಿದರು. ಆದರೆ ಅದು ನೆಲಕ್ಕೆ ಬಿದ್ದುಹೋಯಿತು. ಅವರು ಪ್ರಚಂಡತನದಿಂದ ಇನ್ನೊಂದು ಸಲ ಅದನ್ನು ಮೇಲಕ್ಕೆ ತೆಗೆದು ಕೊಂಡರು. ಅವರ ಸ್ವಂತಸೃಷ್ಟಿಯಲ್ಲಿ ಬಿರಕುಗಳೂ ಒಡಕುಗಳೂ ಆದವು. ಅವರು ತಮ್ಮ ದೊಣ್ಣೆಯನ್ನು ಬೀಸುತ್ತಬಂದರು. ಅವರು ಬೀಸಿದ ಹಾಗೆಲ್ಲ ಅವರ ಸೃಷ್ಟಿಯ ಕೀಲುಗಳೆಲ್ಲ ಕಳಚಿಕೊಂಡವು. ಅವರು ಬ್ರಹ್ಮನ ಪ್ರಪಂಚದ ಕೇಂದ್ರಕ್ಕೆ ಸರಿಯಾಗಿ ಹೊಡೆಯಬೇಕೆಂದು ಗುರಿಯಿಟ್ಟು ದೊಣ್ಣೆಯನ್ನು ತಿರುಗಿಸಿದರು. ಆಗ ಅವರ ಪ್ರಪಂಚದ ಬಿಗಿ ತಪ್ಪಿ ಅದರ ಅಣುಗಳು ದೂರದೂರವಾದವು. ಇನ್ನೂ ಅವರು ಬಿಡದೆ ದೊಣ್ಣೆಯನ್ನು ಬೀಸುತ್ತಲೇ ಹೋದದ್ದರಿಂದ ಅವರ ಸೃಷ್ಟಿಯೆಲ್ಲ ಮತ್ತೆ ಮಂಜುಮಂಜಾದ ಪೂರ್ವಸ್ಥಿತಿಯನ್ನು ಪಡೆಯಿತು. ವಿಶ್ವಾಮಿತ್ರರು ಆಗ ದೊಣ್ಣೆಯನ್ನು ಬಿಸಾಟುಬಿಟ್ಟರು. ಪ್ರಪಂಚ ರಚನೆಗೆಂದು ಅವರು ಕೂಡಿಹಾಕಿದ್ದ ಅಣುಗಳೆಲ್ಲವೂ ಅತ್ಯಂತ ವೇಗದಿಂದ ತಾವು ತಾವು ಮೊದಲಿದ್ದ ಕಡೆಗೆ ಸರಿದುಕೊಂಡು ಹೋಗಿ ಸೇರಿಬಿಟ್ಟವು. ಹೊಸ ಪ್ರಪಂಚವಿದ್ದ ಪ್ರದೇಶವು ಶೂನ್ಯವಾಗಿ ಮಂಜು ಮಂಜಾಗಿ ಕಾಣುವಂತಾಯಿತು. ಸಮುದ್ರದಲ್ಲಿ ಒಂದು ಗುಳ್ಳೆಯು ಅಡಗುವಂತೆ ಹೊಸ ಸೃಷ್ಟಿಯು ಆ ವಿಶಾಲವಾದ ಬಯಲಿನಲ್ಲಿ ಕ್ಷಣ ಮಾತ್ರದಲ್ಲಿ ಅದೃಶ್ಯವಾಯಿತು. ಆ ಹೊಸ ಪ್ರಪಂಚದ ದೆಸೆಯಿಂದ ಝುಳಝುಳನೆ ಹೊಳೆಯುತ್ತಿದ್ದ ಆಕಾಶದ ಈಶಾನ್ಯಭಾಗವು ಈಗ ಬರಿದಾಯಿತು. ವಿಶ್ವಾಮಿತ್ರರ ಲೋಕದ ಹೊಸ ಜನರು ಅನುಭವಿಸು

ತ್ತಿದ್ದ ಸುಖಸಾಧನಗಳು ನಿರ್ನಾಮವಾದವು. ಆ ಜನರು ಕೂಡ ಮತ್ತೆ ರೂಪರಹಿತವಾದ ಅಣುಗಳಾಗಿ ಪರಿಣಮಿಸಿದರು. ಮನೋಹರವಾದ ಪರ್ವತಗಳಿಂದಲೂ ಬಂಡೆಗಳಿಂದಲೂ ಅರಮನೆಗಳಿಂದಲೂ ಕೋಟೆಗಳಿಂದಲೂ ಮತ್ತು ರಾಜಮಾರ್ಗಗಳಿಂದಲೂ ಶೋಭಿಸುತ್ತಿದ್ದ ಆ ಭೂಮಿಯು ತನ್ನ ಪೂರ್ವದ ನಿರಾಕಾರವಾದ ಅಣುಸ್ಥಿತಿಯನ್ನೈದಿತು. ಯಾವದೊಂದು ಉಪದ್ರವವೂ ಇಲ್ಲದೆ ಮೇಲುಕೀಳೆಂಬ ಭೇದಗಳಿಲ್ಲದ ಸಮಾನಪದವಿಯನ್ನನುಭವಿಸುತ್ತ ಐಕಮತ್ಯದಲ್ಲಿದ್ದ ಆ ಜನಸಮುದಾಯವು ಅಪಾರವಾದ ಆ ಶೂನ್ಯಪ್ರದೇಶದಲ್ಲಿ ಮುಳುಗಿಹೋಯಿತು.



## ಕೆಳಗೆ ಬೀಳುವಿಕೆ

ಇನ್ನು ವಿಶ್ವಾಮಿತ್ರರ ಗತಿಯೇನು ? ಅವರಿಗೆ ದೊಣ್ಣೆಯನ್ನು ಬಿಸಾಟಮೇಲೆ ಎಚ್ಚರಿಕೆಯೇ ತಪ್ಪಿತು. ಆದರೆ ಅವರು ಎಲ್ಲಿದ್ದರು? ಅವರಿಗೆಲ್ಲಿಯಾದರೂ ಸ್ಥಲವಿತ್ತೋ? ಆ ವಿಶಾಲವಾದ ಆಕಾಶದಲ್ಲಿಯೇ ಅವರಿಗೆ ಬುದ್ಧಿಭ್ರಮಣೆಯಾಗಿತ್ತು. ಅದುವರೆಗೂ ಅವರ ಸೃಷ್ಟಿಯ ಆಕರ್ಷಣಶಕ್ತಿಯು ಅವರನ್ನು ಹಿಡಿದುಕೊಂಡಿತ್ತು. ಆದರೆ ಈಗ ಹಳೇ ಪ್ರಪಂಚವು ಅವರ ದೀರ್ಘದೇಹವನ್ನು ಆಕರ್ಷಿಸುವದಕ್ಕೆ ಮೊದಲುಮಾಡಿತು. ಅವರು ಬೀಳುವಾಗ ಬುಗರಿಯಂತೆ ಸುತ್ತಲೂ ತಿರುಗುತ್ತಿದ್ದರು. ಇಷ್ಟಾದರೂ ಬ್ರಹ್ಮನಿಗೆ ಅವರ ಮೇಲೆ ಪ್ರೀತಿ ಇದ್ದೇ ಇತ್ತು. ಆದ್ದರಿಂದಲೇ ಅವನು ವಿಶ್ವಾಮಿತ್ರರನ್ನು ಬ್ರಾಹ್ಮಣರನ್ನಾಗಿ ಮಾಡುವದಕ್ಕೆ ಮತ್ತೆ ಮತ್ತೆ ಪ್ರಯತ್ನಮಾಡಿದನು; ಮತ್ತು ಬೈದು ಕಳುಹಿಸಿದರೂ ಕೂಡ ಅವನು ಕರೆದಾಗೆಲ್ಲ ಅವನ ಬಳಿಗೆ ಹೋಗುತ್ತಿದ್ದನು. ವಿಶ್ವಾಮಿತ್ರರು ಉಸಿರಾಡುವದಕ್ಕೆ ಗಾಳಿ ಇಲ್ಲದೆ ಬೇಗ ಸಾಯುವ ಹಾಗೆ ಆಗಿದ್ದಾರೆಂದು ತಿಳಿದು ಬ್ರಹ್ಮನು ಭೂಲೋಕದಿಂದ ಗಾಳಿಯನ್ನು ಸೆಳೆದು ಅವರ ಮುಂದೆ ಬಿಟ್ಟನು. ವಿಶ್ವಾಮಿತ್ರರ ಜೀವವು ಉಳಿದುಕೊಂಡಿತು. ಆದರೆ ಎಚ್ಚರವಿಲ್ಲದೆ ಇನ್ನೂ ಕೆಳಕೆಳಗೆ ಹೋಗುತ್ತ ಸುತ್ತಲೂ ತಿರುಗುತ್ತಲೇ ಇದ್ದರು. ಈ ದುಃಸ್ಥಿತಿಯ ದೆಸೆಯಿಂದ ಅವರ ಬಾಯಿಂದ ರಕ್ತವು ಸುರಿಯಿತು. ಅವರ ದೇಹವೆಲ್ಲ ಬಾತುಕೊಂಡಿತು. ಹೀಗೆ ಅವರು ಎಷ್ಟು ಕಾಲ ಕೆಳಕ್ಕೆ ಬೀಳುತ್ತಲೇ ಇದ್ದರೋ ತಿಳಿಯದು.



# ಏಳನೆ ಸನ್ನಾಹ

## ದೊಡ್ಡ ಯಜ್ಞ

ಇದೇ ಕಾಲದಲ್ಲಿಯೇ ಭೂಮಂಡಲಕ್ಕೇ ಸನ್ನಿಹಿತವಾದ ಒಂದು ಗಂಡಾಂತರ! ಈ ದಿನವನ್ನು ಕಳೆದು ಉಳಿದರೆ ಮಾತ್ರ ಮನುಷ್ಯರ ಮುಖವನ್ನು ಇಲ್ಲಿ ಇನ್ನೊಮ್ಮೆ ಕಾಣಬಹುದು. ನಿಜವಾಗಿ ಸೃಷ್ಟಿಯ ಸ್ಥಿತಿಗತಿಯೇ ಈ ದಿನದ ಸ್ಥಿತಿಗತಿಯ ಮೇಲೆ ಇದೆ. ಕೌಸುಂಬಿಯ ರಾಜನು ಈ ದಿನ ಒಂದು ಯಜ್ಞವನ್ನು ಮಾಡಬೇಕಾಗಿದೆ. ಭೂಮಂಡಲವಾಸಿಗಳಿಗೂ ವಾಯುಮಂಡಲವಾಸಿಗಳಿಗೂ ಸರ್ವರಿಗೂ ಆಹ್ವಾನ ಪತ್ರಿಕೆಗಳು ಹೋಗಿವೆ. ಯಜ್ಞಕ್ರಿಯಾಸಾಧನಗಳು ಒಂದು ವರ್ಷದಿಂದ ಅಣಿಯಾಗುತ್ತಿವೆ. ಕೌಸುಂಬಿಯ ಸುತ್ತಮುತ್ತಣ ವಿಶಾಲವಾದ ಮೈದಾನಗಳೆಲ್ಲ ಜನಮಯವಾಗಿವೆ. ಆದರೂ ಯಾರ ಮನಸ್ಸೂ ಸ್ವಸ್ಥವಾಗಿಲ್ಲ. ಸಮುದ್ರದಂತೆ ಒಟ್ಟುಗೂಡಿರುವ ಈ ವಿಸ್ತಾರವಾದ ಜನಸಮುದಾಯದಲ್ಲಿ ಎಲ್ಲಿ ನೋಡಿದರೂ ಪರಸ್ಪರದ್ವೇಷವು ಬೆಳೆದಿತ್ತು. ಏನಾದರೂ ಸ್ವಲ್ಪ ಹೆಚ್ಚು ಕಡಿಮೆಯಾದರೂ ಆ ಕ್ಷಣದಲ್ಲಿಯೇ ಏನಾದರೊಂದು ಭಯಂಕರವಾದ ವಿಪತ್ತು ಬರುವ ಹಾಗಿತ್ತು. ನಿಜವಾಗಿಯೂ ಅದು ಈಗ ಹಾಗೆಯೇ ಪರಿಣಮಿಸಿತು.

ಕೌಸುಂಬಿಯ ರಾಜನು ಸೂರ್ಯವಂಶದ ಅರಸಾಗಿದ್ದು ಬ್ರಾಹ್ಮಣಪಕ್ಷಪಾತಿಯಾಗಿದ್ದನು. ಅವನ ಯಜ್ಞಕಾರ್ಯಗಳನ್ನು ಮಾಡಿಸುವ ಪೌರೋಹಿತ್ಯಕ್ಕೆ ವಸಿಷ್ಠರು ಗೊತ್ತಾಗಿದ್ದರು. ಕ್ಷತ್ರಿಯರ ಉದ್ಧತತನವನ್ನು ಲೀಲಾಮಾತ್ರದಿಂದ ಅಡಗಿಸಬಲ್ಲ ಒಂದು ಬ್ರಹ್ಮತೇಜೋವಿಶೇಷವುಳ್ಳ ವ್ಯಕ್ತಿಯನ್ನು ಪಡೆಯುವದು ಈ ಯಜ್ಞದ ಉದ್ದೇಶವಾಗಿತ್ತು. ವಸಿಷ್ಠರ ಈ ಉಪಾಯವನ್ನರಿತು ವಿಶ್ವಾಮಿತ್ರರ ಪಕ್ಷದವರು ಕೋಪಾವೇಶವನ್ನು ಹೊಂದಿದ್ದರು. ವಿಶ್ವಾಮಿತ್ರರ ಮಂತ್ರಿಯು ಖರ, ದೂಷಣ ಮತ್ತು ವಾಲಿ—ಮೊದಲಾದವರನ್ನು ತನ್ನ ಕಡೆಗೆ ಕರೆ

ದಿದ್ದನು. ಅವನು ಹಣವನ್ನು ಕೊಡುವದರ ಮೂಲಕ ಬಹು ಪ್ರಬಲವಾದ ಕಳ್ಳಕೂಟದ ಮುಖಂಡರನ್ನು ತನ್ನ ಕಡೆಗೆ ಮಾಡಿಕೊಳ್ಳಬೇಕೆಂದು ಬಹುಕಾಲದಿಂದ ಪ್ರಯತ್ನವನ್ನು ಮಾಡುತ್ತಿದ್ದನು. ಅವರೂ ಈಗ ಅವನಿಗೆ ನೆರವಾಗಿದ್ದರು. ವಸಿಷ್ಠರ ಕಡೆಯ ಬ್ರಾಹ್ಮಣರೂ ಅಯೋಧ್ಯೆಯ ಮತ್ತು ಮಿಥಿಲೆಯ ರಾಜರೂ ಸೇರಿ ಯಜ್ಞಕಾರ್ಯಗಳು ಸಾಂಗವಾಗಿ ನಡೆಯುವದಕ್ಕೆ ತಕ್ಕ ಸನ್ನಾಹಗಳನ್ನು ಮಾಡಿಕೊಂಡಿದ್ದರು. ವಸಿಷ್ಠರ ಪಕ್ಷದವರೆಲ್ಲರೂ ಈಗ ಯಜ್ಞರಕ್ಷಾರ್ಥವಾಗಿ ಆಯುಧಪಾಣಿಗಳಾಗಿ ನಿಂತಿದ್ದರು. ಶಾಂತಿಪ್ರಿಯನಾದ ಗುಹಕನೆಂಬ ರಾಜನೂ ತನ್ನ ಜನರೊಡನೆ ಅಲ್ಲಿ ಸೇರಿದ್ದನು. ಅವನು ಏನಾದರೂ ಮಾಡಿ ಈ ವಿವಾದವನ್ನು ಕಡೆಹಾಯಿಸುವದಾಗಲಿ ಅಥವಾ ಕೊನೆಗೆ ಯುದ್ಧವನ್ನಾದರೂ ನಿಲ್ಲಿಸುವದಾಗಲಿ ಮೊದಲನೆಯ ಕೆಲಸವೆಂದೂ ಇವೆರಡೂ ಆಗದಿದ್ದರೆ ತಪ್ಪುಕಂಡವರ ಮೇಲೆ ಕಾದಬೇಕೆಂದೂ ಗೊತ್ತು ಮಾಡಿಕೊಂಡಿದ್ದನು.

ಇನ್ನು ವಾಲ್ಮೀಕಿಯೋ? ಅವನು ಕಂಡಕಂಡವರನ್ನೆಲ್ಲ ಕೈಹಿಡಿದು ಕಣ್ಣೀರಿಟ್ಟು ಗೋಳಾಡುತ್ತ ಸುತ್ತಲೂ ಅಲೆಯುತ್ತಿದ್ದನು. ಆದರೆ ಯಾರೂ ಅವನನ್ನು ಲಕ್ಷ್ಯಮಾಡಲಿಲ್ಲ. ವಾಲ್ಮೀಕಿಯ ಪ್ರಲಾಪವು ಕಲ್ಲೆದೆಗಳನ್ನು ಕೂಡ ಕರಗಿಸುವ ಹಾಗಿತ್ತು. ಆದರೆ ರಾಜನೀತಿಜ್ಞರೆಂದೂ ನಾಗರಿಕರೆಂದೂ ತಿಳಿದವರೆಂದೂ ಹೇಳಿಸಿಕೊಳ್ಳುತ್ತಿದ್ದವರ ಹೃದಯಗಳು ಮಾತ್ರ ನಿಜವಾಗಿ ಕಲ್ಲಿಗಿಂತ ಗಟ್ಟಿಯಾದ ವಸ್ತುವಿನಿಂದ ಮಾಡಿದಂತಿದ್ದವು. ಮನುಷ್ಯರೊಡನೆ ಕೂಡಿಕೊಂಡಿರುತ್ತ ಲಕ್ಷಗಟ್ಟಲೆ ಮನುಷ್ಯರಿಗೆ ಅತ್ಯಂತವಾಗಿ ಕೇಡುಮಾಡುವ ಮತ್ತು ಒಂದು ಕ್ಷುದ್ರ ವಿಷಯಕ್ಕಾಗಿ ಅವರ ಪ್ರಾಣಗಳನ್ನೇ ತೆಗೆಯುವ ವಿಷಯದಲ್ಲಿ ಸ್ವಲ್ಪವಾದರೂ ಹಿಂದುಮುಂದು ನೋಡದೆ ಇರುವ ಅವರ ಹೃದಯಗಳು ಕಣ್ಣೀರುಗಳಿಂದಲೂ ಕನಿಕರದಿಂದಲೂ ಕರಗುವವೆ? ಅದು ಹೇಗಾದರೂ ಇರಲಿ, ವಾಲ್ಮೀಕಿ ಸುಮ್ಮನೆ ಇರಲಿಲ್ಲ. ಅವನು ಒಂದು ಸಲ ವಸಿಷ್ಠರ ಬಳಿಗೆ, ಇನ್ನೊಂದು ಸಲ ಪರನ ಬಳಿಗೆ, ಮತ್ತೊಂದು ಸಲ ದೂಷಣನ ಬಳಿಗೆ—ಹೀಗೆ ಹೋಗಿ ಹೋಗಿ ಕೈ ಕೈ ಹಿಡಿದು ಅಂಗಲಾಚಿಕೊಂಡು ಹೇಳುತ್ತಿದ್ದನು. ಮತ್ತೊಬ್ಬರನ್ನು ಅಡಗಿಸಬೇಕೆಂಬುದನ್ನು

ಬಿಟ್ಟು ಎಲ್ಲರನ್ನೂ ಪ್ರೇಮದಿಂದ ಕೂಡಿಸಬೇಕೆಂಬುದೇ ಅವನ ಉದ್ದೇಶ. ಅಲ್ಲಿ ಸೇರಿದ್ದ ಯೋಧರಿಗೂ ಮತ್ತು ಇತರ ಜನರಿಗೂ ಅವನ ಈ ಗೋಳಾಟವು ಬಹು ಮರುಕವನ್ನುಂಟುಮಾಡಿತು. ಆದರೆ ಅತ್ಯುನ್ನತ ಪದವಿಯಲ್ಲಿದ್ದ ರಾಜನೀತಿಜ್ಞರ ಮನಸ್ಸು ಮಾತ್ರ ಎಳ್ಳಷ್ಟೂ ಕರಗಲಿಲ್ಲ. ಅವರು ಅವನನ್ನು ಕಡೆಗಣ್ಣಿಂದಲೂ ನೋಡಲಿಲ್ಲ.

ಕೊನೆಗೆ ವಸಿಷ್ಠರು ಯಜ್ಞದ ಅಗ್ನಿಯನ್ನು ಉರಿಗೊಳಿಸುವಂತೆ ನಿರೂಪಿಸಿದರು. ಪುರೋಹಿತರು ಯಜ್ಞವೇದಿಯನ್ನು ಹತ್ತಿದರು. ವಾಲ್ಮೀಕಿಗೆ ನಿರಾಶೆಯಾಯಿತು. ಅವನು ಗುಹಕನೆದುರಿಗೆ ನೆಲದ ಮೇಲೆ ಬಿದ್ದು ಕಣ್ಣೀರು ಸುರಿಸುತ್ತ ಉರುಳಿದನು. ಗುಹಕನು ಅವನನ್ನು ಸಂತಯಿಸುವದಕ್ಕೆ ಪ್ರಯತ್ನವನ್ನು ಮಾಡಿದನು. ಯಜ್ಞದ ಅಗ್ನಿಯನ್ನು ಉರಿಗೊಳಿಸುತ್ತಲೇ ರಕ್ತವು ಕೋಡಿಯಿಡುವದಕ್ಕೆ ಮೊದಲಾಗುವದೆಂದು ಎಲ್ಲರೂ ತಿಳಿದಿದ್ದರು. ಬ್ರಾಹ್ಮಣರು ಯಜ್ಞವೇದಿಯನ್ನು ಹತ್ತಿದ ಸುದ್ದಿ ಬರುತ್ತಲೆ ಪ್ರತಿಪಕ್ಷದವರು ಅದರ ಹತ್ತಿರಕ್ಕೆ ಬಂದು ಆಯುಧಪಾಣಿಗಳಾಗಿ ನಿಂತರು. ಅವರನ್ನು ಹಿಂದಕ್ಕೆ ನೂಕುವದಕ್ಕೆ ಯಜ್ಞಪಕ್ಷದವರು ಇನ್ನೊಂದು ಪಕ್ಕದಲ್ಲಿ ಸಿದ್ಧರಾದರು. ಗುಹಕನು ಸಾಧ್ಯವಾದರೆ ಅವರಿಬ್ಬರಿಗೂ ಮಧ್ಯಸ್ಥಿಕೆಯನ್ನು ಮಾಡಬೇಕೆಂದು ಮುಂಗಡೆಯಲ್ಲಿಯೇ ನಿಂತುಕೊಂಡನು. ವಾಲ್ಮೀಕಿಯು ಐಕಮತ್ಯವೆಂದರೆ ಒಬ್ಬ ಬಲಿಷ್ಠನ ದಾಕ್ಷಿಣ್ಯಕ್ಕೆ ಇತರರು ತಲೆಹಾಕುವದಾಗಿರದೆ ಎಲ್ಲರೂ ಮನಃಪೂರ್ವಕವಾಗಿ ಸಹಾನುಭೂತಿಯುಳ್ಳವರಾಗಿರಬೇಕೆಂದೂ ಆ ಐಕಮತ್ಯಕ್ಕೆ ಬಾಂಧವಪ್ರೇಮದ ಹೊರತು ಎರಡನೆ ಉಪಾಯವಿಲ್ಲವೆಂದೂ ಇತರರನ್ನು ತಗ್ಗಿಸಬೇಕೆಂಬ ಕ್ಷುದ್ರವಾದ ಉದ್ದೇಶದಿಂದ ಪವಿತ್ರವಾದ ಯಜ್ಞವನ್ನು ಮಾಡಬಾರದೆಂದೂ ಹೇಳಿ ಯಜ್ಞವೇದಿಯನ್ನು ಹತ್ತಿ ಬ್ರಾಹ್ಮಣರ ಕಯ್ಯಿಂದ ಅಗ್ನಿಯನ್ನು ಕಿತ್ತುಕೊಂಡು ಯಜ್ಞವೇದಿಯ ಮಧ್ಯದ ಗುಂಡಿಯಲ್ಲಿ ಕುಳಿತನು. ಬ್ರಾಹ್ಮಣರು ಅವನನ್ನು ಎಳೆದು ಒಂದು ಪಕ್ಕಕ್ಕೆ ನೂಕಿದರು. ಅವನು ಇನ್ನು ಅಲ್ಲಿಗೆ ಬರದಂತೆ ಅವನ ಕೈಕಾಲುಗಳನ್ನು ಕಟ್ಟಿಹಾಕುವದಕ್ಕೆ ಮುನ್ನೂರು ಜನ ಬ್ರಾಹ್ಮಣರು ಸೇರಿದರು. ಹೀಗೆ ಮಹತ್ತಾದ ಕಲ

ಹವು ನಡೆಯಿತು. ಬ್ರಾಹ್ಮಣರು ಮತ್ತೆ ಅಗ್ನಿಯನ್ನು ಉರಿಗೊಳಿಸುವ ದಕ್ಕೆ ಸಿದ್ಧಮಾಡಿದರು. ಆಗ ಮೋಡವಿಲ್ಲದ ಆಕಾಶದಿಂದ ಬ್ರಾಹ್ಮಣರ ಮೇಲೆ ನೀರಿನ ಹನಿಗಳು ಬಂದು ಬಿದ್ದವು. ಅದು ಮೈಲಿಗೆಯ ನೀರೆಂದು ನಿಶ್ಚಯಮಾಡಿಕೊಂಡು ಬ್ರಾಹ್ಮಣರು ಸ್ನಾನದಿಂದ ಶುದ್ಧರಾಗುವದಕ್ಕೆ ಎದ್ದುಹೋದರು. ಕೆಲವುಹೊತ್ತು ಸಮಿಪದ ಮಾರಿ ದೂರವಾದಂತಾ ಯಿತು. ಎಲ್ಲರ ಮನಸ್ಸಿನಲ್ಲಿಯೂ ಅಪೂರ್ವವಾದ ಮತ್ತು ಅನಿರ್ವಾ ಚ್ಯವಾದ ಏನೇನೋ ಸಂಶಯಗಳು ತುಳುಕಾಡುತ್ತಿದ್ದವು. ಅಂತು ಎಲ್ಲರೂ ಒಂದು ಭಯಂಕರವಾದ ಯುದ್ಧದ ಹಾಗೆ ಏನೋ ಒಂದು ನಡೆಯುವದೆಂದು ನಿಶ್ಚಯಮಾಡಿಕೊಂಡರು.



## ಎಚ್ಚರವೇ ಇಲ್ಲ

ಭೂಮಂಡಲದ ವಿದ್ಯಮಾನವು ಹೀಗಿದ್ದಾಗ ವಿಶ್ವಾಮಿತ್ರರು ಕೆಳಕೆಳಕ್ಕೆ ಬೀಳುತ್ತಿದ್ದರು. ಬ್ರಹ್ಮನು ಕನಿಕರದಿಂದ ಅವರಿಗೆ ಮೆಲ್ಲ ಮೆಲ್ಲಗೆ ಎಚ್ಚರವಾಗುವಂತೆ ಮಾಡಿದನು. ಹಾಗೆ ಎಚ್ಚರವಾದಾಗ ಅವರ ಮನಸ್ಸು ಹೇಗೆ ಇತ್ತೊ, ಮನುಷ್ಯಮಾತ್ರದವರು ಹೇಗೆ ಹೇಳ ಲಾದೀತು! —"ನಾನು ಎಲ್ಲಿದ್ದೇನೆ"—ಎಂದು ಯೋಚಿಸುತ್ತ ಅವರು ಕಣ್ಣುಬಿಡುವದಕ್ಕೆ ಯತ್ನಿಸಿದರು. ಹೀಗೆ ಎಷ್ಟೋ ಸಲ ಚೇತರಿಸಿ ಕೊಳ್ಳುವದೂ ಮೈಮರೆಯುವದೂ ಆಯಿತು. ಒಂದು ಸಲ ಜ್ಞಾನವು ಬಂದಾಗ—"ನಾನೆಲ್ಲಿಗೆ ಹೋಗುತ್ತಿದ್ದೇನೆ?" –ಎಂದು ಕೆಳಗೆ ನೋಡಿ ದಾಗ ನರಕವು ಸಮಿಪದಲ್ಲಿ ಕಾಣಬರಲು ಅವರು ಭಯಭ್ರಾಂತರಾಗಿ ಮತ್ತೆ ಎಚ್ಚರತಪ್ಪಿದರು. ಇನ್ನೊಂದು ಸಲ ಜ್ಞಾನವು ಬಂದಾಗ ಅವರು—"ನನ್ನ ಸೃಷ್ಟಿಯೆಲ್ಲಿ"?—ಎಂದು ಹಂಬಲಿಸಿ ಮೈಮರೆತರು. ಮತ್ತೊಂದುಸಲ—"ಅಯ್ಯೋ! ದುರಭಿಮಾನದಿಂದ ತಪಶ್ಶಕ್ತಿಯನ್ನೆಲ್ಲ ಕಳೆದುಕೊಂಡೆನಲ್ಲ! ನಾನು ಎಲ್ಲಿಗೆ ಹೋಗಿ ಬೀಳುವೆನೊ ತಿಳಿಯ ದಲ್ಲ! ನನಗೆ ಹಿಂದಿರುಗುವ ಶಕ್ತಿ ಇಲ್ಲವಲ್ಲ! ನೋಡುವದಕ್ಕೂ ಆಗದಿ ರುವದಲ್ಲ!"—ಎಂದು ಕನವರಿಸಿದರು.

ವಿಶ್ವಾಮಿತ್ರರು ಹೀಗೆಲ್ಲ ಹಂಬಲಿಸುತ್ತ ಕಣ್ಣೀರು ಸುರಿಸಿದರು. ಆ ಹನಿಗಳೇ ಬ್ರಾಹ್ಮಣರ ಮೇಲೆ ಬಿದ್ದವುಗಳು. ಅತ್ತು ಅತ್ತು ಅವರು ಮತ್ತಷ್ಟು ಸೊರಗಿದರು. ಮತ್ತೆ ಅವರ ಇಂದ್ರಿಯಗಳು ಪರವಶವಾದವು. ಆಮೇಲೆ ಅವರು ಋಭುಗಳ ಹಾಡನ್ನು ನೆನಪಿಗೆ ತಂದುಕೊಂಡು—"ಒಬ್ಬನು ಇತರರ ಮೇಲೆ ತನ್ನ ಕೈ ನಡೆಯಬೇಕೆಂದು ಯತ್ನಮಾಡುತ್ತಿರದೆ ಇದ್ದರೆ ಇದುವರೆಗೆ ಒಕ್ಕಟ್ಟು ನೆಲೆಗೊಂಡು ಎಷ್ಟೋ ದಿನವಾಗಿರುತ್ತಿತ್ತಲ್ಲವೇ?"-ಎಂದು ಯೋಚಿಸುತ್ತ ಇನ್ನೆಂದೂ ದುರಾಶೆಯನ್ನು ಮಾಡುವದಿಲ್ಲವೆಂದು ನಿಶ್ಚಯಮಾಡಿಕೊಂಡರು. ಈ ಯೋಚನೆಗಳೆಲ್ಲ ನಡೆಯುತ್ತಿರುವಾಗಲೂ ಅರ್ಧ ಎಚ್ಚರ; ಅರ್ಧ ಮರವೆ. ಈ ಸ್ಥಿತಿಯಲ್ಲಿ ಅವರು ಇನ್ನೂ ಕೆಳಕ್ಕೆ ಬೀಳುತ್ತಲೇ ಇದ್ದರು.

## ಒಳ್ಳೇ ಪರಿಸ್ಥಿತಿ

ಬ್ರಾಹ್ಮಣರು ಸ್ನಾನಮಾಡಿ ಬಂದು ಒಂದು ಸಲ ಮೇಲ್ಗಡೆಗೆ ನೋಡಿದಾಗ ಮನುಷ್ಯಾಕಾರವಾಗಿರುವ ಒಂದು ದೊಡ್ಡ ವಸ್ತು ಯಜ್ಞವೇದಿಯ ಮಧ್ಯದ ಗುಂಡಿಯ ಕಡೆಗೆ ಬರುತ್ತಿರುವದನ್ನು ಕಂಡರು. ಎಲ್ಲರೂ ಅದರ ಕಡೆಗೆ ಮೇಲೆ ನೋಡಿದರು. ಎಲ್ಲರಿಗೂ ಹೆದರಿಕೆಯುಂಟಾಯಿತು. ಆ ಅಪೂರ್ವವಾದ ನೋಟಕ್ಕೆ ಎಲ್ಲರೂ ಬೆರಗಾಗಿ ನಿಂತರು. ವಾಲ್ಮೀಕಿಯನ್ನು ಹಿಡಿದಿದ್ದವರೆಲ್ಲರೂ ಅವನ ಕೈಬಿಟ್ಟರು. ವಾಲ್ಮೀಕಿಯು ಯಜ್ಞವೇದಿಯ ಮಧ್ಯದ ಗುಂಡಿಯ ಕಡೆಗೆ ಓಡಿದನು. ಅಷ್ಟು ಹೊತ್ತಿಗೆ ಮೇಲಿನಿಂದ ಬರುತ್ತಿದ್ದ ಸ್ಥೂಲದೇಹವು ಅಲ್ಲಿಗೆ ಬಂದು ಬಿತ್ತು. ಅದು ವಿಶ್ವಾಮಿತ್ರರೆಂದು ಗುರ್ತು ಹಿಡಿದು ವಾಲ್ಮೀಕಿಯು ಅವರನ್ನು ನೆನೆಸಿಕೊಂಡು ಮಿತಿ ಇಲ್ಲದೆ ಬಿಕ್ಕಿ ಬಿಕ್ಕಿ ಅಳುತ್ತ ಎದೆಯ ಮೇಲೆ ಕಣ್ಣೀರಿನ ಕೋಡಿಗಳನ್ನು ಹರಿಸುತ್ತ ಶೋಕ ರಸಪ್ರಧಾನವಾದ ಒಂದು ಹಾಡನ್ನು ಹಾಡಿದ್ದೇನೆಂದರೆ:—

**ಕಾನಡಾ ರೂಪಕ**

(ರಾಮನಾಮ ಭಜಿಸಿದವರಿಗುಂಟೆ ಭವದ ಬಂಧನ-ಎಂಬಂತೆ)

**ನೋಡಿರೀಗ ಗಾಧಿಸುತನ । ಪಾಡನೆಲ್ಲ ಜನಗಳೇ ।**
**ಮಾಡಬೇಡಿರೊಳಜಗಳವ । ಕೂಡಿ ನಡೆಯಿರೀಗಳೆ ॥ಅಪ॥**

ಹೊಸದೆನಿಪ್ಪ ಜಗವ ರಚಿಸಿ । ಬಿಸಜಭವನ ಬೆರಗುಗೈಸಿ ।
ಅಸಮಶೂರನಾಗಿ ಕೊನೆಗೆ । ದೆಸೆಯ ಕಾಣದಾದನೀ ಋಷಿ ॥ ೧ ॥

ನಾಶವಾಯಿತಾ ಜಗತ್ತು । ಮೋಸವಾಯಿತೀಗ ಮತ್ತು ।
ಈಶನಿವನೆಂದೆಂಬ ಹೆಸರು । ವಾಸಿ ನಾಮಮಾತ್ರವಾಯ್ತು ॥ ೨ ॥

ಬ್ರಹ್ಮನು ಕಣ್ಣೀರಸಿಟ್ಟ । ಬ್ರಹ್ಮಸಮನೆ ಈ ಗತಿಯಾಗೆ ।
ನಿಮ್ಮ ಪಾಡಿನ್ನೇನೆಂದು । ಸುಮ್ಮನೊಮ್ಮೆ ಯೋಚಿಸಿ ನೋಡಿರಿ ॥ ೩ ॥

ವೀಣಾಗಾನದಿಂದನುಗತವಾದ ವಾಲ್ಮೀಕಿಯ ಕರುಣಾರಸಪೂರಿತ ಪ್ರಲಾಪಗಳನ್ನು ಕೇಳಿ ಎಲ್ಲರೂ ವಿಶೇಷವಾಗಿ ಪಶ್ಚಾತ್ತಾಪವನ್ನು ಹೊಂದಿ ಗಟ್ಟಿಯಾಗಿ ಅತ್ತು ತಮ್ಮ ಆಯುಧಗಳನ್ನೆಲ್ಲ ಒಂದೊಂದು ಕಡೆಗೆ ಒಗೆದು ಯುದ್ಧಸನ್ನಾಹದಿಂದ ವಿಮುಖರಾದರು. ವಿಶ್ವಾಮಿತ್ರರಿಗೆ ಈಗೀಗ ಎಚ್ಚರವಾಗುತ್ತ ಬಂತು. ವೀಣಾನಾದವು ಅವರಿಗೆ ದೂರಸ್ಥವಾದ ಒಂದು ಗಾನದಂತೆ ಕೇಳಿತು. ಅವರು ಇನ್ನೂ ಭಯಂಕರವಾದ ಸ್ಥಿತಿಯನ್ನೇ ಕನವರಿಸುತ್ತಿದ್ದರು. ಅವರ ಶರೀರತಾಪವು ಕ್ರಮಕ್ರಮವಾಗಿ ಕಡಿಮೆಯಾಯಿತು. ಅವರು ಕಣ್ಣುಬಿಟ್ಟು ನೋಡಿದಾಗ ವಾಲ್ಮೀಕಿಯ ಹಾಡುಗಾರಿಕೆ ನಡೆಯುತ್ತಿತ್ತು. ಅಲ್ಲಿ ಕೇಳಬರುತ್ತಿದ್ದ ಮೃದುಮಧುರವಾದ ಉಪದೇಶವೂ ನಮ್ರತೆಯಿಂದ ಕೂಡಿದ ಪ್ರಾರ್ಥನೆಯೂ ಅವರ ಹೃದಯಕ್ಕೆ ಬಾಣಗಳಂತೆ ನಟ್ಟವು. ಅವರ ದೃಷ್ಟಿಗೆ ಮೊದಲು ಬ್ರಹ್ಮನು ಕಂಡನು. ಅಲ್ಲಿ ನೆರೆದಿದ್ದ ಜನರ ಮುಂದೆಯೂ ಕೂಡ ಬ್ರಹ್ಮರ್ಷಿಗಳಿಂದಲೂ ದೇವರ್ಷಿಗಳಿಂದಲೂ ಕೂಡಿದ ಬ್ರಹ್ಮನ ದಿವ್ಯರೂಪವು ಕ್ರಮಕ್ರಮವಾಗಿ ಸ್ಪಷ್ಟವಾಗಿ ಕಾಣುವ ಮೂರ್ತಿಯಾಯಿತು. ಆಗ ಬ್ರಹ್ಮನ ಮೈಯೆಲ್ಲ ವಿಶ್ವಾಮಿತ್ರರ ಕಣ್ಣೀರಿನಿಂದ ತೊಳೆದುಹೋಯಿತು. ವಿಶ್ವಾಮಿತ್ರರು ತನ್ನ ಎರಡು ಕೈಗಳನ್ನೂ ಜೋಡಿಸಿಕೊಂಡು ಅವನ ಕ್ಷಮೆಯನ್ನು ಬೇಡಿಗೊಳ್ಳುತ್ತಿದ್ದರು. ವಿಶ್ವಾಮಿತ್ರರಿಗೆ ಕಣ್ಣೀರು ಬಂದದ್ದು ಅದೇ ಮೊದಲು. ಬ್ರಹ್ಮನು ಒಡನೆಯೇ ಅವರನ್ನು ಎತ್ತಿಕೊಂಡು ಆಲಿಂಗಿಸಿ–''ಮಗುವೇ, ಈ ದಿನ ನೀನು ಬ್ರಾಹ್ಮಣನಾದೆ''—ಎಂದು ಹೇಳಿದನು.

ಆ ಮಾತನ್ನು ಕೇಳಿ ವಿಶ್ವಾಮಿತ್ರರು ಮತ್ತಷ್ಟು ದುಃಖದಿಂದ ಮತ್ತೆ ಅವನ ಪಾದಗಳ ಮೇಲೆ ಬಿದ್ದರು. ವಾಲ್ಮೀಕಿಯ ಹಾಡು

ಮುಂದೆ ಸಾಗುತ್ತಿತ್ತು. ಆಗ ವಿಶ್ವಾಮಿತ್ರರು—“ನಾನು ಎಲ್ಲಿದ್ದೇನೆ” —ಎಂದು ದೀನಸ್ವರದಿಂದ ಬ್ರಹ್ಮನನ್ನು ಕೇಳಿದರು. ಬ್ರಹ್ಮನು —“ನೀನು ಭೂಮಿಯ ಮೇಲೆ ಇದ್ದಿ; ನಿನಗೆ ಇನ್ನು ದುಃಖಲೇಶವೂ ಇಲ್ಲದಂತೆ ಮಾಡುವೆನು”–ಎಂದು ತನ್ನ ಕಮಂಡಲುವಿನ ತೀರ್ಥಜಲವನ್ನು ಅವರ ದೇಹದ ಮೇಲೆ ಪ್ರೋಕ್ಷಿಸಲಾಗಿ ಅದು ಅವರಿಗೆ ಹೊಸದಾಗಿ ಶಕ್ತಿಯನ್ನು ಕೊಟ್ಟು ಅವರನ್ನು ಉಜ್ಜೀವನಗೊಳಿಸಿತು. ವಿಶ್ವಾಮಿತ್ರರು ಮೇಲಕ್ಕೆದ್ದು ದೃಷ್ಟಿಯನ್ನು ಪ್ರಸರಿಸಿದಾಗ ಲೋಕವೆಲ್ಲ ಅಳುತ್ತಿತ್ತು. ದೂರದಲ್ಲಿ ಒಬ್ಬನು ಹಾಡುತ್ತಿದ್ದನು.

ವಿಶ್ವಾಮಿತ್ರರು ತಮ್ಮ ಉದ್ಧತತನವನ್ನು ಬಿಟ್ಟೊಡನೆಯೇ ತಮಗಿನ್ನು ಯಜ್ಞದಿಂದ ಆಗಬೇಕಾದದ್ದೇನೆಂದು ವಸಿಷ್ಠರು ಯಜ್ಞಕಾರ್ಯವನ್ನು ಬಿಟ್ಟು ಒಡನೆ ಎಷ್ಟೋ ಗಡಿಬಿಡಿಯಿಂದ ಓಡಿಬಂದು ವಿಶ್ವಾಮಿತ್ರರನ್ನು ಅಪ್ಪಿಕೊಂಡರು. ವಿಶ್ವಾಮಿತ್ರರಿಗೆ ಬ್ರಾಹ್ಮಣತ್ವವನ್ನು ಕೊಡುವ ವಿಷಯದಲ್ಲಿ ವಸಿಷ್ಠರಿಗಿದ್ದ ವಿರೋಧಾಭಿಪ್ರಾಯವು ಈಗ ಸಂಪೂರ್ಣವಾಗಿ ದೂರವಾಗಿತ್ತು. ವಿಶ್ವಾಮಿತ್ರರು ದುಃಖದಿಂದ ನರಳುತ್ತಿದ್ದಾಗಲೆಲ್ಲ ವಸಿಷ್ಠರು ಮನಸ್ಸಿನಲ್ಲಿ ಮರುಗುತ್ತಿದ್ದರು. ವಿಶ್ವಾಮಿತ್ರರು ಬ್ರಾಹ್ಮಣರಾಗಬೇಕೆಂದು ಪ್ರಯತ್ನಿಸಿದಾಗ ಅವರ ಮೇಲೆ ಪ್ರತಿಭಟಿಸಬೇಕೆಂದಿದ್ದ ಯೋಚನೆಗಳೆಲ್ಲ ಈಗ ಮಾಯವಾದವು. ಕಾಠಿನ್ಯವು ಮಾರ್ದವವಾಗಿ ಪರಿಣಾಮವನ್ನು ಪಡೆಯಿತು. ವಸಿಷ್ಠರು ತಮ್ಮ ಕೈಗಳಿಂದಲೇ ಅಭಿಮಂತ್ರಿಸಿದ ಯಜ್ಞೋಪವೀತವನ್ನು ವಿಶ್ವಾಮಿತ್ರರ ಕೊರಳಿಗೆ ಹಾಕಿ–‘**ಇಂದಿನಿಂದ ನಾವಿಬ್ಬರೂ ಒಂದು**’–ಎಂದು ಆಲಿಂಗನಮಾಡಿದರು. ವಿಶ್ವಾಮಿತ್ರರು-“ಸ್ವಾಮಿ, ಮಹರ್ಷಿಗಳೆ, ಮತ್ತನಾಗಿ ತಿಳಿವಳಿಕೆ ಇಲ್ಲದೆ ನಾನು ನಿಮಗೆ ಅನೇಕ ತೊಂದರೆಗಳನ್ನುಂಟುಮಾಡಿ ನಿಮ್ಮ ವಿಷಯದಲ್ಲಿ ಕ್ರೂರವಾದ ಮಾತುಗಳನ್ನಾಡಿದೆನು. ಈ ದಿನ ನನ್ನ ದುಃಸ್ಥಿತಿಯನ್ನು ನೋಡಿ ನಿಮ್ಮ ಕಣ್ಣುಗಳಿಂದ ನೀರು ಸುರಿಯುತ್ತಿದೆ. ಆದರೆ ನಿಮ್ಮ ಕಷ್ಟಸಮಯದಲ್ಲಿ ನಾನೆಂದೂ ಕಣ್ಣೀರುಹಾಕಿದವನಲ್ಲ. ನನ್ನ ಕಣ್ಣಲ್ಲಿ ನೀರು ಬರುವದಕ್ಕೆ ಇದೇ ಮೊದಲು. ಇದಕ್ಕೆ ಈ ದಿನದ

ನಿಮ್ಮ ದಯೆಯೇ ಕಾರಣವು. ಈಗ ಬ್ರಾಹ್ಮಣರು ಅತ್ಯಂತಬಡವಾ ಮುಯುರಿಂಬುದನ್ನು ನಾನು ತಿಳಿದೆನು.''– ಎಂದು ಬ್ರಹ್ಮನ ಕಡೆಗೆ ತಿರುಗಿ—''ದೇವ, ನೀನು ಸೃಷ್ಟಿಕರ್ತನು. ಆಹಾ! ನಾನು ನಿನ್ನನ್ನು ಹೇಗೆ ಅವಮಾನಮಾಡಿದೆನು!! ನಿನ್ನ ಕಾಲಿಗೆ ಬಳೆಯನ್ನು ತೊಡಿಸಿ ನಿನ್ನನ್ನು ನೆರೆಯಲ್ಲಿಡಬೇಕೆಂದು ಕೂಡ ಮಾಡಿದ್ದೆನಲ್ಲ!!! ಈ ದಿನ ನನ್ನ ಆಪತ್ಕಾಲದಲ್ಲಿ ನೀನು ನನಗೆ ಜೀವದಾನವನ್ನು ಮಾಡಿರುತ್ತಿ. ನಿನ್ನ ಕರುಣೆಗೆ ಪಾರವೇ ಇಲ್ಲವಲ್ಲ!''— ಎಂದು ಉಪಚರಿಸಿದರು. ಅದಕ್ಕೆ —''ಮಗು, ನಿನ್ನಂಥ ಮಹರ್ಷಿಯನ್ನು ನಾನು ಕ್ಷಮಿಸದಿದ್ದರೆ ಸೃಷ್ಟಿಕರ್ತನಿಗೆ ದಯಾಮಯನೆಂಬ ವಿಶೇಷಣವು ವ್ಯರ್ಥ''— ಎಂದು ಬ್ರಹ್ಮನು ಹೇಳಿದನು.

ವಸಿಷ್ಠವಿಶ್ವಾಮಿತ್ರರನ್ನು ನೋಡಿ ಬ್ರಾಹ್ಮಣರೂ ಕ್ಷತ್ರಿಯರೂ ಎಲ್ಲರೂ ಅವರ ಯುದ್ಧಸಂಬಂಧವಾದ ಉಡಿಗೆತೊಡಿಗೆಗಳನ್ನು ಬಿಸಾಟು ಒಬ್ಬರನ್ನೊಬ್ಬರು ಅಪ್ಪಿಕೊಂಡರು. ಅವರು ಪ್ರತಿಯೊಬ್ಬರೂ ತಮ್ಮ ತಮ್ಮ ಅಂತರಂಗದಲ್ಲಿದ್ದ ದುರಭಿಪ್ರಾಯಗಳನ್ನು ಬಯಲಿಗೆ ಹಾಕಿ ಒಬ್ಬ ರನ್ನೊಬ್ಬರು ಕ್ಷಮೆಯನ್ನು ಕೇಳಿದರು. ಭಯಂಕರವಾದ ವಿಪತ್ಕಾಲವು ಒದಗುವದೆಂಬ ನಿರೀಕ್ಷಣೆಯು ಹೋಗಿ ಶಾಂತಿಪ್ರಸಾರವಾದದ್ದನ್ನು ನೋಡಿ ಗುಹಕನು ಆನಂದದಿಂದ ಕುಣಿಯುವದಕ್ಕೆ ಮೊದಲುಮಾಡಿ ದನು. ಕೌಶಾಂಬಿಯ ರಾಜನು ಮೊದಲು ತನ್ನ ಯಜ್ಞಕ್ಕೊದಗಿದ್ದ ದುರವಸ್ಥೆಯನ್ನು ಕಂಡು ಬಹುದುಃಖಿತನಾಗಿದ್ದನು. ಆದರೆ ಈಗ ಆದ ಒಳ್ಳೆ ಪರಿಸ್ಥಿತಿಯನ್ನು ನೋಡಿ ಅವನು ಕೂಡ ಆನಂದಪೂರ್ಣನಾಗಿ ಯಜ್ಞಕ್ಕಾಗಿ ತಂದಿದ್ದ ಪದಾರ್ಥವನ್ನೆಲ್ಲ ವಿಶ್ವಾಮಿತ್ರರ ಉಪನಯನ ಕ್ಕೆಂದು ಉದಾರಹಸ್ತದಿಂದ ದಾನಮಾಡಿಬಿಟ್ಟನು.

ವಾಲ್ಮೀಕಿಯು ಸಹೋದರಭಾವದ ಹಾಡನ್ನು ಹೇಳಿಕೊಂಡು ಆನಂದದಿಂದ ಕುಣಿಯುತ್ತಿದ್ದನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಮ್ಲೇಚ್ಛ, ಯವನ, ರಾಕ್ಷಸ, ವಾನರ, ಈ ಎಲ್ಲರನ್ನೂ ಅವನು ಅಭೇದಬುದ್ಧಿಯಿಂದ ಆಲಿಂಗನಮಾಡುತ್ತಿದ್ದನು. ಕೊನೆಗೆ ಅವನು

ಹಾಗೆಯೇ ಕುಣಿಯುತ್ತ ಹಾಡುತ್ತ ಬ್ರಹ್ಮನ ಬಳಿಗೆ ಬಂದು ಅವನನ್ನೂ ಆಲಿಂಗನಮಾಡಿದನು. ಬ್ರಹ್ಮನೂ ಅವನನ್ನು ಆಲಿಂಗನಮಾಡಿ —"ವಾಲ್ಮೀಕಿಯೇ, ಈ ದಿನದ ಜಯವೆಲ್ಲ ನಿನ್ನದು!!!"—ಎಂದು ಹೇಳಿದನು. ದೂರದಲ್ಲಿದ್ದ ವಸಿಷ್ಠರೂ ಬಂದು ಅವನನ್ನು ಆಲಿಂಗನಮಾಡಿಕೊಂಡು ಅದೇ ಮಾತನ್ನು ತಾವೂ ಹೇಳಿದರು. ನಾಲ್ಕು ದಿಕ್ಕುಗಳಿಂದಲೂ— "**ವಾಲ್ಮೀಕಿಯ ಜಯ! ವಾಲ್ಮೀಕಿಯ ಜಯ !!**"— ಎಂಬ ಧ್ವನಿ ಹೊರಟಿತು. ಗುಹಕನ ಕಡೆಯವರು ಗಟ್ಟಿಯಾಗಿ —"**ವಾಲ್ಮೀಕಿಯ ಜಯ! ವಾಲ್ಮೀಕಿಯ ಜಯ!!**"— ಎಂದು ಕೂಗಿದರು. ಎಲ್ಲಕಡೆಯಿಂದಲೂ— "**ವಾಲ್ಮೀಕಿಯ ಜಯ**" — ಎಂದು ಪ್ರತಿಧ್ವನಿ ಬಂದಿತು.

ರಾತ್ರಿ ಸಮಾಪಿಸಿತು. ಎಲ್ಲರೂ ದುಃಖಜಲದಿಂದ ನೆನೆದ ಕಣ್ಣುಳ್ಳವರಾಗಿ ತಮ್ಮ ತಮ್ಮ ಮನೆಯ ದಾರಿಯನ್ನು ಹಿಡಿದರು. ಅರಾಜಕವು ಇಂದಿಗೆ ಕೊನೆಯಾಯಿತೆಂದು ಎಲ್ಲರೂ ಭರವಸವನ್ನು ಹೊಂದಿದರು. ವಿಶ್ವಾಮಿತ್ರರು ಬ್ರಾಹ್ಮಣರಾಗುತ್ತಲೆ ರಾಜಪದವಿಯನ್ನು ಬಿಟ್ಟುಬಿಟ್ಟರು. ಅವರ ಸಂತತಿಯವರು ಕನ್ಯಕುಬ್ಜದ ಸಿಂಹಾಸನಕ್ಕೆ ಪಟ್ಟಾಭಿಷೇಕವನ್ನು ಮಾಡಿಕೊಂಡರು. ಬ್ರಹ್ಮನು ಅಲ್ಲಿಂದ ಹೊರಡುವಾಗ ವಸಿಷ್ಠರು, ವಿಶ್ವಾಮಿತ್ರರು, ವಾಲ್ಮೀಕಿ—ಈ ಮೂವರು ಋಷಿಗಳನ್ನೂ ಕರೆದು— "ಲೋಕದಲ್ಲಿ ಶಾಂತಿಯನ್ನು ನೆಲೆಗೊಳಿಸುವದಕ್ಕೆ ಸಾಕ್ಷಾನ್ನಾರಾಯಣನೇ ಅವತರಿಸಬೇಕಾದ ಸಂಭವವಿದೆ. ಈ ಉದ್ದೇಶವು ನೆರವೇರುವದಕ್ಕೆ ಅವನು ಯಾವ ರೀತಿಯಲ್ಲಿ ವ್ಯವಹರಿಸಬೇಕೆಂಬದನ್ನು ನೀವು ಗೊತ್ತುಮಾಡಿ ಹೇಳಿರಿ."—ಎಂದು ಆಜ್ಞಾಪಿಸಿ ಅಂತರ್ಧಾನನಾದನು. ವಿಶ್ವಾಮಿತ್ರರೂ ವಾಲ್ಮೀಕಿಯೂ ವಸಿಷ್ಠರ ಹಿಂದೆ ಅವರ ಆಶ್ರಮಕ್ಕೆ ಹೋಗಿ ಅಲ್ಲಿ ಆಲೋಚನೆಯನ್ನು ನಡೆಸುವದಕ್ಕೆ ಮೊದಲು ಮಾಡಿದರು.

# ಎಂಟನೆ ಸನ್ನಾಹ

## ಕಾವ್ಯರಚನೆ

ವಸಿಷ್ಠರೂ ವಿಶ್ವಾಮಿತ್ರರೂ ವಾಲ್ಮೀಕಿಯೂ ಒಂದು ಕಡೆ ಸೇರಿದ್ದಾರೆ. ರಾಮಾವತಾರಕ್ಕಿನ್ನೂ ಅರವತ್ತು ಸಾವಿರ ವರ್ಷಗಳಿವೆ. ಅಲ್ಲಿಂದ ಮುಂದೆ ಆಗಬೇಕಾದ ಕಾರ್ಯದ ವಿಷಯದಲ್ಲಿ ಮೂವರೂ ಮನಸ್ಸು ಹಾಕಿದ್ದಾರೆ. ಅವರ ವಿಚಾರವು ಬರೀ ರಾಮಾಯಣದ ಒಣ ಕಥಾಭಾಗವಲ್ಲ; ಜಗತ್ತಿನಲ್ಲಿ ಎಲ್ಲರಲ್ಲಿಯೂ ಬಂಧುಭಾವವನ್ನು ಸ್ಥಾಪಿಸುವ ಯೋಜನೆ. ಅನೇಕ ಕಷ್ಟನಿಷ್ಠುರಗಳನ್ನು ಅನುಭವಿಸಿದ ಮೇಲೆ ವಿಶ್ವಾಮಿತ್ರರು ಮನುಷ್ಯಶಕ್ತಿಯಲ್ಲಿ ಹುರುಳಿಲ್ಲವೆಂದು ಮನಗಂಡಿದ್ದಾರೆ. ಆದರೆ ಎಲ್ಲರನ್ನೂ ಒಕ್ಕಟ್ಟು ಮಾಡಬೇಕೆಂಬ ಇಚ್ಛೆಯು ಋಭುಗಳ ಗಾನವನ್ನು ಕೇಳಿದಂದಿನಿಂದಲೂ ಹೆಚ್ಚುತ್ತಲೇ ಇದೆ. ಕೌಶಾಂಬಿಯ ಗದ್ದಲವು ನಡೆದ ಮೇಲೆ ಜನರ ಒಕ್ಕಟ್ಟಿಗೆ ಬರೀ ಬುದ್ಧಿಬಲವು ಎಷ್ಟು ಮಾತ್ರವೂ ಸಾಲದೆಂದು ವಸಿಷ್ಠರ ಮನಸ್ಸಿಗೂ ತೋರಿದೆ. ಪ್ರೇಮವೇ ಒಕ್ಕಟ್ಟಿಗೆ ಸಾಧನವೆಂದು ಮನಗಂಡ ಅವರಿಬ್ಬರೂ ಬಹುಮಟ್ಟಿಗೆ ಶಾಂತಿಸಾಧನದ ವಿಷಯದಲ್ಲಿ ವಾಲ್ಮೀಕಿಯ ಅಭಿಪ್ರಾಯಕ್ಕೆ ಅನುಮೋದನವನ್ನು ಕೊಡುವದೇ ತಮ್ಮ ಮುಖ್ಯಕರ್ತವ್ಯವೆಂದು ನಿರ್ಣಯಮಾಡಿಕೊಂಡಿದ್ದಾರೆ. ಹೀಗೆ ವಾಲ್ಮೀಕಿಯ ಪ್ರೀತಿ, ವಸಿಷ್ಠರ ಬುದ್ಧಿ, ವಿಶ್ವಾಮಿತ್ರರ ರಾಜನೀತಿನೈಪುಣ್ಯ—ಇವೆಲ್ಲವನ್ನೂ ಸೇರಿಸಿ ಪ್ರಕೃತವಿಷಯವನ್ನು ಯೋಚಿಸಿ ನಿಶ್ಚಯಿಸುವದಕ್ಕೆ ಅವರ ಪ್ರಯತ್ನವು ನಡೆದಿದೆ.

ಮೂವರೂ ವಿಚಾರಮಾಡಿ ನೋಡಿದರು. ವಸಿಷ್ಠರು ವಿಶ್ವಾಮಿತ್ರರನ್ನು ಆದರಿಸಿದ್ದರಿಂದಲೂ ವಿಶ್ವಾಮಿತ್ರರು ಬ್ರಾಹ್ಮಣಪದವಿಯನ್ನು ಪಡೆದದ್ದರಿಂದಲೂ ಆವೆರಡು ಜಾತಿಗಳಲ್ಲಿ ಒಕ್ಕಟ್ಟು ಒಡಮೂಡಿತೆನ್ನಬಹುದಾದರೂ ಹಿಂದಿನ ಪರಿಸ್ಥಿತಿಗಳನ್ನು ನೆನೆಸಿಕೊಂಡಾಗ ಮತ್ತೆ

ಅದು ಮರುಕಳಿಸಬಹುದೆಂದು ತೋರಿದ್ದರಿಂದ ರಾಮಾವತಾರವು ಆ ಎರಡು ಜಾತಿಗಳ ಒಕ್ಕಟ್ಟಿಗೆ ಸಾಧನವಾಗಬೇಕೆಂದು ನಿಶ್ಚಯವಾಯಿತು. ರಾಮನು ಅಯೋಧ್ಯೆಯಲ್ಲಿ ಹುಟ್ಟಿ ಜನಕರಾಜನ ಮಗಳನ್ನು ಮದುವೆಯಾಗಿ ಗುಹಕನೊಡನೆ ಗೆಳೆತನವನ್ನು ಬೆಳೆಸತಕ್ಕದ್ದೆಂದು ನಿರ್ಧಾರವಾಯಿತು. ಆಮೇಲೆ ಅವನು ಪರಶುರಾಮನನ್ನು ನಾಶಮಾಡಬೇಕೆಂಬ ಸೂಚನೆಯು ಬಂತು. ನಾಶಸಂಬಂಧವಾದ ಅಭಿಪ್ರಾಯಕ್ಕೆಲ್ಲ ವಾಲ್ಮೀಕಿಯು ಬಲವತ್ತರವಾದ ಪ್ರತಿಪಕ್ಷಿಯಾದದ್ದರಿಂದ ರಾಮನು ಪರಶುರಾಮನ ಗರ್ವವನ್ನು ಮುರಿಯಬೇಕೆಂದು ನಿಶ್ಚಯವಾಯಿತು. ಹೀಗೆ ಆರ್ಯರಲ್ಲಿ ಶಾಂತಿಯನ್ನು ನೆಲೆಗೊಳಿಸಿದ ಮೇಲೆ ಅನಾರ್ಯರನ್ನು ದಾರಿಗೆ ತರುವದಕ್ಕಾಗಿ ವಾನರರಲ್ಲಿ ಗುಣಾಢ್ಯರಿಗೆ ಬೆಂಬಲವನ್ನು ಕೊಟ್ಟು ಪಾಪಿಷ್ಠರನ್ನು ಕೊಲ್ಲಬೇಕೆಂಬ ಮಾತು ಬಂತು. ಪ್ರಾಣಿಹಿಂಸೆಗೇ ಅವಕಾಶವನ್ನು ಕೊಡಕೂಡದೆಂದು ವಾಲ್ಮೀಕಿಯು ಬಹಳವಾಗಿ ವಾದಿಸಿದನು. ಆದರೂ ವಾಲಿಯನ್ನು ಮಾತ್ರ ಕೊಲ್ಲಬಹುದೆಂದು ಗೊತ್ತಾಯಿತು. ಆಮೇಲೆ ಕ್ರೂರರಾದ ರಾಕ್ಷಸರನ್ನು ಕೊಂದು ವಿಭೀಷಣನಿಗೆ ಪಟ್ಟವನ್ನು ಕಟ್ಟಬೇಕೆಂಬ ಸುದ್ದಿ ಹೊರಟಿತು. ಬಹುಜನ ರಾಕ್ಷಸರನ್ನು ಕೊಲ್ಲುವ ವಿಷಯದಲ್ಲಿ ವಾಲ್ಮೀಕಿಯು ಸಮ್ಮತಿಯನ್ನು ಕೊಡಲಿಲ್ಲ. ಆದರೂ ವಸಿಷ್ಠರೂ ವಿಶ್ವಾಮಿತ್ರರೂ ಆ ಅಸಮ್ಮತಿಯನ್ನು ಲಕ್ಷ್ಯ ಮಾಡಲಿಲ್ಲ. ಏಕೆಂದರೆ ರಾಕ್ಷಸರು ಅತ್ಯಂತಕ್ರೂರರಾಗಿದ್ದರು. ಹೀಗೆಲ್ಲ ನಿಶ್ಚಯವಾದ ಮೇಲೆ ವಾಲ್ಮೀಕಿಯು ಈ ವಿಷಯಗಳನ್ನೆಲ್ಲ ಗರ್ಭೀಕರಿಸಿ ಲೋಕಸ್ಥಿತಿಯನ್ನೂ ಚೆನ್ನಾಗಿ ವರ್ಣಿಸಿ ಒಂದು ಮಹಾಕಾವ್ಯವನ್ನು ಬರೆಯಬೇಕೆಂದು ಗೊತ್ತಾಯಿತು.

ಹೀಗೆ ನಿರ್ಣಯವಾದಾಗ ವಸಿಷ್ಠರು ವಾಲ್ಮೀಕಿಯನ್ನು ಕುರಿತು ರಾಮನನ್ನು ಸಕಲಗುಣಗುಣಾಢ್ಯರಿಗೆ ಶಿರೋಭೂಷಣಪ್ರಾಯನನ್ನಾಗಿ ತೋರಿಸಬೇಕೆಂದೂ ಅವನಲ್ಲಿ ಪಾಪಲೇಶವೂ ಇರಕೂಡದೆಂದೂ ಹೇಳಿದರು. ರಾಮನು ಕ್ಷತ್ರಿಯನೇ ಆಗಬೇಕೆಂದೂ ಅವನಲ್ಲಿ ಶೌರ್ಯವೂ ರಾಜನೀತಿನೈಪುಣ್ಯವೂ ಚೆನ್ನಾಗಿ ತೋರಬೇಕೆಂದೂ ಅವನೊಬ್ಬ ರಾಜ

ನಾಗಿರಬೇಕೆಂದೂ ವಿಶ್ವಾಮಿತ್ರರು ಅಭಿಪ್ರಾಯಪಟ್ಟರು. ಆಗ ವಾಲ್ಮೀಕಿಯು— "ಒಳ್ಳೇದು; ನಿಮ್ಮ ಆಜ್ಞೆಯನ್ನು ತಲೆಯ ಮೇಲಿಟ್ಟುಕೊಳ್ಳುತ್ತೇನೆ. ರಾಮನನ್ನು ನಾನು ಋಷಿಯಾಗಿಯೂ ಮಾಡುವದಿಲ್ಲ; ಬರೀ ಶೂರನನ್ನಾಗಿಯೂ ಮಾಡುವದಿಲ್ಲ; ಬರೀ ರಾಜನೀತಿಜ್ಞನನ್ನಾಗಿಯೂ ಮಾಡುವದಿಲ್ಲ. ಅವನನ್ನು ಲೋಕಕ್ಕೇ ಆದರ್ಶಪ್ರಾಯನಾದ ಮನುಷ್ಯನನ್ನಾಗಿ ಮಾಡುತ್ತೇನೆ. ಅವನ ಚರಿತ್ರೆಯಲ್ಲಿ ಗಂಡಸು, ಹೆಂಗಸು, ಗಂಡ, ಹೆಂಡತಿ, ತಮ್ಮ, ಕುಟುಂಬ, ಸ್ನೇಹಿತ, ಶತ್ರು, ಸೇವಕ, ರಾಜ, ರಾಜ್ಯಭಾರ—ಇವುಗಳನ್ನೆಲ್ಲ ಆದರ್ಶಸ್ವರೂಪವಾಗಿ ಬರೆಯುತ್ತೇನೆ. ಈ ಕಥಾನಾಯಕನು ನಿಮ್ಮ ದಯದಿಂದ ಎಲ್ಲ ದೇಶಕ್ಕೂ ಎಲ್ಲ ಜಾತಿಗೂ ಎಲ್ಲಕ್ಕೂ ಮೇಲುಪಙ್ಕ್ತಿಯಾಗುವಂತೆ ಮಾಡುತ್ತೇನೆ." —ಎಂದು ಹೇಳಿದನು. ಅದಕ್ಕೆಲ್ಲರೂ ಒಪ್ಪಿದರು. ಆಗ ಅವನು ತನ್ನ ಸರ್ವೋತ್ಕೃಷ್ಟವಾದ ಬುದ್ಧಿಬಲದಿಂದ ರಾಮಾಯಣವೆಂಬ ಮಹಾಕಾವ್ಯವನ್ನು ರಚಿಸಿ ಅದನ್ನು ವಸಿಷ್ಠವಿಶ್ವಾಮಿತ್ರರ ಎದುರಿಗೆ ಓದಿದನು. ಅವರು ಅದನ್ನು ಕೇಳಿ ಮನಃಪೂರ್ವಕವಾಗಿ ಮೆಚ್ಚಿ ಸಂತುಷ್ಟಾಂತರಂಗರಾದರು.

## ರಾ ಮ ರಾ ಜ್ಯ

ಸಮಸ್ತಸೃಷ್ಟಿಜಾತಕ್ಕೂ ಕರ್ತನಾದ, ತೇಜೋಮಯನಾದ ನಾರಾಯಣನು ಭೂಮಿಯ ಮೇಲೆ ಅವತರಿಸಿ ಆ ಮೂವರೂ ಸೇರಿ ಗೊತ್ತುಮಾಡಿದ್ದ ಮಾರ್ಗವನ್ನನುಸರಿಸಿ ನಡೆದು ದುಷ್ಟಶಿಕ್ಷೆಯನ್ನೂ ಶಿಷ್ಟರಕ್ಷೆಯನ್ನೂ ಮಾಡಿ ಭೂಲೋಕದಲ್ಲಿ ಶಾಂತಿಯನ್ನು ನೆಲೆಗೊಳಿಸಿದನು. ಅವನ ಅಭಯಹಸ್ತಚ್ಛಾಯಾಬಲದಿಂದ ಭೂಮಿಯು ಫಲವತ್ತಾಗಿ ಧನಧಾನ್ಯಸಮೃದ್ಧಿಯಾಗಿ ಸಮಸ್ತೈಶ್ವರ್ಯಕ್ಕೂ ತವರುಮನೆಯಾಯಿತು. ವಿಸ್ತಾರವಾದ ವನಭೂಮಿಗಳೆಲ್ಲ ದೊಡ್ಡ ದೊಡ್ಡ ಪಟ್ಟಣಗಳಾದವು. ನದಿಗಳಲ್ಲಿ ಎಲ್ಲಿ ನೋಡಿದರೂ ಪ್ರಯಾಣಿಕರಾದ ವ್ಯಾಪಾರಗಾರರ ತಂಡಗಳೂ ವಿನೋದಾರ್ಥವಾದ ದೋಣಿಗಳೂ ತುಂಬಿರುತ್ತಿದ್ದವು. ಜನರ ಸುಖಸಾಧನಗಳು ದಿನದಿನಕ್ಕೆ ಹೆಚ್ಚಿದವು. ಕಳ್ಳರ ಹೆಸರು ಕೂಡ ಅಡಗಿಹೋಯಿತು. ಜನರು ಮಾರಿಕಾದ್ಯುಪದ್ರವಗಳ ಮತ್ತು ಇತರ ಅಂಟುರೋಗಗಳ ದೆಸೆಯಿಂದಾಗುವ ಅಕಾಲಮರಣಗಳ ವಿಷಯ

ವನ್ನೇ ಮರೆತುಬಿಟ್ಟರು. ಜನರು ಚತುಷ್ಷಷ್ಟಿ ಕಲಾನಿಪುಣರಾದರು. ಬಗೆಬಗೆಯ ಶಿಲ್ಪಕಾರ್ಯಗಳೂ ಮುಗಿಲುಮುಟ್ಟಿದುವು. ಎಲ್ಲಿ ನೋಡಿದರೂ ಸೂರ್ಯಕಿರಣಗಳು ಪ್ರತಿಫಲಿಸಿರುವ ಉನ್ನತವಾದ ಪ್ರಾಸಾದಗಳು. ಎಲ್ಲಿಗೆ ಹೋದರೂ ಕೋಮಲವಾದ ಹೃದಯದಿಂದ ಹೊರಡುವ ಮಧುರಗಾನ. ಎಲ್ಲಿ ದಿಟ್ಟಿಸಿದರೂ ಜಾತಿ, ಮಲ್ಲಿಕಾ, ಮಾಲತಿ, ಕುರವಕ, ನವಮಲ್ಲಿಕಾ, ನಾಗಕೇಸರ, ವಕುಳ—ಮೊದಲಾದ ಸುವಾಸನೆಯುಳ್ಳ ಹೂಗಳು ಪ್ರತಿಯೊಂದು ತೋಟದಲ್ಲಿಯೂ ಅರಳಿರುತ್ತಿದ್ದುವು. ಪ್ರತಿಯೊಂದು ಜಲಾಶಯದಲ್ಲಿಯೂ ಕಮಲಗಳೂ ನೈದಿಲೆಗಳೂ ತಮ್ಮ ಪರಿಮಳಗಳಿಂದ ದಶದಿಕ್ಕುಗಳಿಗೂ ಸುವಾಸನೆಯನ್ನು ಬೀರುತ್ತಿದ್ದುವು. ಕಾಲಕಾಲಕ್ಕೆ ಸಮೃದ್ಧಿಯಾಗಿ ಮಳೆ ಬರುತ್ತಿದ್ದುದರಿಂದ ಹುಟ್ಟು ದರಿದ್ರ ಕಷ್ಟನಿಷ್ಠುರಗಳು ಕೂಡ ಬಯಲಾದುವು.

ವಸಿಷ್ಠರು ಸಹೃದಯರಾಗಿ ಜನರನ್ನು ಆನಂದಗೊಳಿಸುತ್ತಿದ್ದರು. ವಿಶ್ವಾಮಿತ್ರರು ರಾಜನೀತಿಯ ಕೌಶಲ್ಯದಿಂದ ಜನರ ಒಳಜಗಳಗಳನ್ನು ಹಿಮ್ಮೆಟ್ಟಿಸಿ ಎಲ್ಲೆಲ್ಲಿಯೂ ನೆಮ್ಮದಿಯನ್ನು ನೆಲೆಗೊಳಿಸುತ್ತಿದ್ದರು.

ಇದರಿಂದ ವಾಲ್ಮೀಕಿಗೆ ಅಪಾರವಾದ ಆನಂದ! ವೀಣೆಗೆ ವಿರಾಮವಿಲ್ಲದಂತೆ ಅವನ ಹಾಡು ಸಾಗಿದೆ. ಯಾರನ್ನು ನೋಡಿದರೂ— **"ಒಡಹುಟ್ಟಿದವರೆ, ಒಡನಾಡುವವರೆ, ಒಡಗೂಡಿರುವವರೆ"**— ಎಂಬರ್ಥದ ಗಾನವನ್ನು ಹಾಡುತ್ತಿದ್ದಾರೆ. ಇಷ್ಟಾದರೂ ಜನರಲ್ಲಿ ಒಕ್ಕಟ್ಟಿನ ಭಾವನೆಯು ನಿಜವಾಗಿ ಬಂದಿದೆಯೋ ಇಲ್ಲವೋ ಎಂದು ವಾಲ್ಮೀಕಿಗೆ ಸಂಶಯ!!

## ಕಾವ್ಯಶ್ರವಣ

ಹೀಗೆ ಎಷ್ಟೋ ಕಾಲ ಕಳೆಯಿತು. ಶ್ರೀರಾಮನ ವೈಕುಂಠಪ್ರಯಾಣದ ಸಮಯವು ಒದಗಿದೆ. ರಾಮನು ತಮ್ಮನಾದ ಲಕ್ಷ್ಮಣನನ್ನು ಕಾರಣಾಂತರದಿಂದ ಹೊರಕ್ಕೆ ಹಾಕಿ ಅತ್ಯಂತ ಉದ್ವಿಗ್ನನಾಗಿ ಸರಯೂನದೀತೀರದಲ್ಲಿ ಜಲಸಮಾಧಿಯನ್ನು ಪಡೆಯುವ ಸಂಕಲ್ಪವನ್ನು ಮಾಡಿದ್ದಾನೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದ, ರಾಕ್ಷಸ, ವಾನರ—ಮೊದಲಾದವರಿಂದ ಸಭೆ ಕಿಕ್ಕಿರಿದು ಹೋಗಿದೆ.

ಆ ಸಮಯದಲ್ಲಿ ರಾಮಾಯಣವೆಂಬ ಆ ಮಹಾಕಾವ್ಯವನ್ನು ಶ್ರವಣ ಮಾಡಿಸಬೇಕೆಂದು ವಸಿಷ್ಠವಿಶ್ವಾಮಿತ್ರರು ವಾಲ್ಮೀಕಿಯನ್ನು ನಿರ್ಬಂಧ ಗೊಳಿಸುತ್ತಿದ್ದಾರೆ.

ವಾಲ್ಮೀಕಿಯು—"ತಥಾಸ್ತು"–ಎಂದು ವೀಣೆಯನ್ನು ನುಡಿಸಿ ದನು. ಅವನಿಂದ ಸುಶಿಕ್ಷಿತರಾದ ಕುಶಲವರು ರಾಮಾಯಣವನ್ನು ಗಾನಮಾಡಿದರು. ಅದನ್ನು ಕೇಳುತ್ತ ಕೇಳುತ್ತ ಜನರು ಒಂದೊಂದು ಕಡೆ ದುಃಖಾತಿರೇಕದಿಂದಲೂ ಒಂದೊಂದು ಕಡೆ ಸಂತೋಷಾತಿರೇಕ ದಿಂದಲೂ ಕಣ್ಣೀರಿಡುತ್ತಿದ್ದರು. ಶ್ರೀರಾಮನು ತನ್ನ ನಡೆವಳಿಕೆಯ ನ್ನೆಲ್ಲ ನೆನಪಿಗೆ ತಂದುಕೊಂಡು ಹರ್ಷದುಃಖಗಳೆರಡನ್ನೂ ಏಕಕಾಲದಲ್ಲಿ ಅನುಭವಿಸಿದನು. ರಾಮನನ್ನೂ ಈ ಸ್ಥಿತಿಗೆ ತಂದ ವಾಲ್ಮೀಕಿಯ ಕಲಾ ನೈಪುಣ್ಯವನ್ನು ನೋಡಿ ವಸಿಷ್ಠವಿಶ್ವಾಮಿತ್ರರು ಬೆರಗಾಗಿದ್ದರು.

ಈ ಸಮಯಕ್ಕೆ ಸರಿಯಾಗಿ ಆಕಾಶದ ಆ ಶುಭ್ರಮಾರ್ಗವು ಇಬ್ಭಾಗವಾಗಿ ಅಲ್ಲಿಂದ ವಾಲ್ಮೀಕಿಯ ತಲೆಯ ಮೇಲೆ ಹೂವಿನ ಮಳೆಯು ಸುರಿಯಿತು. ಎಲ್ಲರೂ ಮೇಲಕ್ಕೆ ನೋಡಲಾಗಿ ಋಭುಗಳು ಲವಕುಶರ ರಾಮಾಯಣದ ಗಾನಕ್ಕೆ ಹಿಮ್ಮೇಳದವರಂತೆ ಹಾಡುತ್ತ ಕೆಳಕ್ಕೆ ಬರುತ್ತಿದ್ದರು. ಅಲ್ಲಿ ನೆರೆದಿದ್ದವರೆಲ್ಲರಿಗೂ ಆಶ್ಚರ್ಯದ ಮೇಲಾ ಶ್ಚರ್ಯ! ಆ ಗಾನವು ಮತ್ತಷ್ಟು ಮಧುರವಾಗುತ್ತ ಬಂತು. ಆ ಋಭುವರ್ಗದ ಗಾನದಿಂದ ಎಲ್ಲರೂ ಎಚ್ಚರದಪ್ಪಿದ್ದಾರೆ!

ಋಭುಗಳೊಡನೆ ಹಾಡಬೇಕೆಂದು ವಸಿಷ್ಠರಿಗೂ ವಿಶ್ವಾಮಿತ್ರ ರಿಗೂ ಬಹಳ ಆಸೆ ಇತ್ತಷ್ಟೆ. ಈಗ ಅವರು ತಮ್ಮ ಪೂರ್ಣಕಂಠದಿಂದ ರಾಮಾಯಣವನ್ನು ಹಾಡುವದಕ್ಕಾರಂಭಿಸಿದರು. ಋಭುಗಳು, ಮನು ಷ್ಯರು, ಮಹರ್ಷಿಗಳು—ಎಲ್ಲರೂ ಎರಡು ಕೈಗಳನ್ನೂ ಎತ್ತಿ ಒಂದೇ ಶ್ರುತಿಯಲ್ಲಿ ಗಾನಮಾಡಿದರು!! ಬರೀ ಇಷ್ಟೇ ಅಲ್ಲ; ಶ್ರೀರಾಮ ಮೂರ್ತಿಯೇ ತನ್ಮಯಚಿತ್ತನಾಗಿ ತಾನೂ ಆ ಗಾನದಲ್ಲಿಯೂ ನೃತ್ಯ ದಲ್ಲಿಯೂ ಭಾಗಿಯಾದನು!!! ಈ ಸಮಯಕ್ಕೆ ಬ್ರಹ್ಮನು ಬರದೆ ಇದ್ದರೆ ಬಹುಮಟ್ಟಿಗೆ ಅದಕ್ಕೆ ಮುಕ್ತಾಯವೇ ಆಗುತ್ತಿರಲಿಲ್ಲ.



# ಪರಂಧಾಮ

ಬ್ರಹ್ಮನು ಅಲ್ಲಿಗೆ ಬಂದು ನೋಡಿದಾಗ ಅವನಿಗೂ ಎಚ್ಚರ ತಪ್ಪಿತು. ಈ ಪ್ರೇಮಾತಿಶಯದ ಆವೇಶವನ್ನು ಬಿಗಿಹಿಡಿದುಕೊಂಡು ಅವನು ವೈಕುಂಠಕ್ಕೆ ಬಿಜಯಂಗೈಯಬೇಕೆಂದು ರಾಮನ ಮುಂದೆ ತನ್ನ ವಿಜ್ಞಾಪನೆಯನ್ನಿಟ್ಟನು. ರಾಮನು ಪ್ರಜೆಗಳಿಗೆಲ್ಲ ಹೇಳಿ ಕೇಳಿ ತನ್ನ ಸ್ಥೂಲದೇಹವನ್ನು ಸರಯೂನದಿಯಲ್ಲಿ ಬಿಟ್ಟನು. ಅವನ ತಮ್ಮಂದಿರೂ ಅಣ್ಣನ ದಾರಿಯನ್ನೇ ಹಿಡಿದು ಪರಬ್ರಹ್ಮದಲ್ಲಿ ಲೀನರಾದರು. ವಯೋವೃದ್ಧರಾದ ಎಷ್ಟೋ ಪ್ರಜೆಗಳು ಆಗ ಋಭುಗಳ ಪದವಿಗೆ ಸೇರಿದರು. ಹಳೇ ಋಭುಗಳು ಹೊಸ ಋಭುಗಳನ್ನು ಆದರದಿಂದ ಅಪ್ಪಿಕೊಂಡು ಮತ್ತೆ ಅದೇ ಹಾಡನ್ನೇ ಹಾಡಿದರು.

ಸ್ಥೂಲದೇಹವನ್ನು ಬಿಟ್ಟು ಸಪ್ತರ್ಷಿಮಂಡಲಕ್ಕೆ ಬರಹೇಳಿ ಬ್ರಹ್ಮನು ವಸಿಷ್ಠರನ್ನು ಕರೆದನು. ವಸಿಷ್ಠರು ಸರಯೂನದಿಯಲ್ಲಿ ತಮ್ಮ ದೇಹವನ್ನು ಬಿಟ್ಟು ಜ್ಯೋತಿಶ್ಶರೀರಿಗಳಾಗಿ ಪ್ರತಿದಿನವೂ ನಕ್ಷತ್ರ ಮಂಡಲದಲ್ಲಿ ಮೂಡುವದಕ್ಕಾರಂಭಿಸಿದರು. ವಿಶ್ವಾಮಿತ್ರರೂ ದೇಹವನ್ನು ಬಿಟ್ಟು ಋಭುಗಳ ಪದವಿಗೇ ಸೇರಿದರು. ಬ್ರಹ್ಮನು ಸ್ವರ್ಗಕ್ಕೆ ಬಾರೆಂದು ವಾಲ್ಮೀಕಿಯನ್ನು ಕರೆದಾಗ ಅವನು ಬಿಕ್ಕಿ ಬಿಕ್ಕಿ ಅಳುತ್ತ ಕಣ್ಣೀರಿಡುತ್ತ ಬ್ರಹ್ಮನಿಗೆರಗಿ ಹೇಳಿದ್ದೇನೆಂದರೆ:—"ನಾನು ಮಹಾ ಪಾಪಿಯು. ನಿನ್ನ ಅಪೇಕ್ಷೆಯನ್ನು ಹೇಗೆ ನಡೆಸಲಿ? ನನ್ನ ಪಾಪಗಳಿಗೆಲ್ಲ ಪ್ರಾಯಶ್ಚಿತ್ತವಾಗಬೇಕಲ್ಲ! ದೇವ, ಪಾಪಿಯು ಸ್ವರ್ಗಕ್ಕೆ ಬಂದು ಏನು ಮಾಡಬೇಕು? ಮನುಷ್ಯರಲ್ಲಿ ಒಕ್ಕಟ್ಟನ್ನುಂಟುಮಾಡದೆ ನನ್ನ ಪಾಪಗಳಿಗೆ ಹೇಗೆ ನಿವಾರಣೆಯಾದೀತು? ಜನಗಳಲ್ಲೆಲ್ಲ ಇನ್ನೂ ಅನೇಕ ಅಹಂಭಾವಗಳು ತುಂಬಿತುಳುಕುತ್ತಿವೆಯಲ್ಲ! ಈ ಅಭಿಮಾನವೊಂದು ಹೋದರೆ ಇಡೀ ಜಗತ್ತೇ ಸ್ವರ್ಗಕ್ಕೇರಬಹುದಲ್ಲವೇ? ಈಗ ನಾನು ನಿನ್ನ ಅಪ್ಪಣೆಯನ್ನು ನಡೆಸಲಾರೆನು. ಇದೊಂದು ಸಲ ನನ್ನನ್ನು ಮನ್ನಿಸು."

ಈ ಮಾತನ್ನು ಕೇಳಿ ಬ್ರಹ್ಮನಿಗೆ ಕೂಡ ಮುಂದೋರದೆ ಹೋಯಿತು. ಋಭುಗಳೆಲ್ಲರೂ ವಾಲ್ಮೀಕಿಯ ತಲೆಯ ಮೇಲೆ ಹೂವಿನ ಮಳೆಯನ್ನು ಕರೆದರು.





# ...ಸ್. ಎಸ್. ಎನ್. ಬುಕ್...

## ಬಸವನಗುಡಿ (ಬೆಂಗಳೂರು ಸಿಟಿ)

ಪರಿಗ...

...ಮ್ಮಲ್ಲಿ ಪ್ರೈಮರೀ ಸ್ಕೂಲು ಮೊದಲುಗೊಂಡು ಕಾಲೇ... ...ಳವರೆಗೆ ಇಟ್ಟಿರುವ ಎಲ್ಲ ಪುಸ್ತಕಗಳೂ ಅಲ್ಲದೆ ಮಂತ್ರದ ಪುಸ್ತ... ನಾಟಕಗಳೂ ವೇದಾಂತಗ್ರಂಥಗಳೂ ಲೋಕಪ್ರಖ್ಯಾತರ ಜೀವ... ಗಳೂ—ಮುಖ್ಯವಾಗಿ ಕನ್ನಡದ ಪ್ರಸಿದ್ಧಗ್ರಂಥಗಳೆಲ್ಲ– ದೊರೆಯ...

ಇಷ್ಟೇ ಅಲ್ಲ; ಎಲ್ಲ ವಿಧವಾದ ಎಕ್ಸರಸೈಜು ಪುಸ್ತಕಗಳೂ ಸ್ಕೂ... ನೋಟ್‌ಬುಕ್ಕುಗಳೂ ಡ್ರಾಯಿಂಗ್ ಬುಕ್ಕುಗಳೂ ಕಾಪಿಪುಸ್ತ... ಮತ್ತು ಎಲ್ಲರಿಗೂ ಉಪಯುಕ್ತವಾದ ಎಲ್ಲ ವಿಧವಾದ ಸ್ಟೇಷನರಿ... ...ಸುಗಳೂ ನಮ್ಮಲ್ಲಿ ಯಾವಾಗಲೂ ಮಾರಾಟಕ್ಕೆ ಸಿದ್ಧವಾಗಿರುತ್ತ...

ಲೆಡ್ಜರುಗಳ ಬೈಂಡು, ಲಾ ಪುಸ್ತಕಗಳ ಬೈಂಡು, ಕಿತ್ತಾನಾರಿನ... ರೇಷ್ಮೆ ಬೈಂಡು ಮೊದಲಾದ ಎಲ್ಲ ಬಗೆಯ ಬೈಂಡುಗಳೂ ನಮ್ಮ... ಸುಂದರವಾಗಿ ಆಗುತ್ತವೆ. ತಯಾರಾದ ಬ್ಲಾಟಿಂಗ್‌ಪ್ಯಾಡುಗಳೂ... ಬೋರ್ಡುಗಳೂ ಸಿದ್ಧವಾಗಿವೆ. ಹೊಸದಕ್ಕೆ ಆರ್ಡರು ಕೊ... ಕಾಲಕ್ಕೆ ಸರಿಯಾಗಿ ಬಹು ಚೆನ್ನಾಗಿ ಮಾಡಿ ಕೊಡಲಾಗುವದು. ಶುದ್ಧವಾದ ಖಾದಿಯ ಮಾರಾಟವೂ ಇದೆ.

ಇದಲ್ಲದೆ ಇಲ್ಲಿ ಎಲ್ಲಬಗೆಯ ರೂಲಿಂಗ್ ಕೆಲಸಗಳೂ ನಡೆಯು...

**ಪದಾರ್ಥದ ಯೋಗ್ಯತೆಗೆ ತಕ್ಕಷ್ಟೇ ನಿಯಮಿತವಾ... ನಂಬಿಕೆಯಾದ ವ್ಯಾಪಾರ, ಕೇಳಿದ್ದನ್ನು ತಡವಿಲ್ಲದೆ ಒದಗಿಸ...** ಇವನ್ನು ನಾವು ಬಹು ಮುಖ್ಯವಾಗಿಟ್ಟುಕೊಂಡಿರುವೆವು. ಪ... ಕಪ್ರವೃತ್ತಿಯಿಂದ ಕನ್ನಡದ ವಾಚಕವರ್ಗದ ಸೇವೆಯನ್ನು ಕೈಕೊ... ನಮ್ಮ ವ್ಯಾಪಾರದ ಸೌಲಭ್ಯದ ರುಚಿಯನ್ನು ಒಮ್ಮೆ ನೋ... ಎಂದೂ ಹಿಂದಿರುಗಲಾರರೆಂದು ನಮಗೆ ಸಂಪೂರ್ಣವಾದ ಭ...

**ತಮ್ಮ ಆರ್ಡರನ್ನು ಬಹಳ ಉತ್ಸಾಹದಿಂದ ನಿರೀಕ್ಷಿಸು...**

ಎಮ್. ರಾಮರಾವ್...

**ಪ್ರೊಪ್ರೈಟರ್, ಎಸ್. ಎಸ್. ಎನ್. ಬುಕ್...**

**ಬಸವನಗುಡಿ (ಬೆಂಗಳೂ...**